

# ಉಪನಿಷತ್ತುಗಳ ಅರ್ಥಲೋಕ

ಆರ್. ಡಿ. ಹೆಗಡೆ, ಆಲ್ಮನೆ



ನವಕರ್ನಾಟಕ ಪ್ರಕಾಶನದ ೮೭೯ನೇ ಪ್ರಕಟಣೆ

# ಉಪನಿಷತ್ತುಗಳ ಅರ್ಥಲೋಕ

## (ವಿಮರ್ಶಾ ಸಂಕಲನ)

ಆರ್. ಡಿ. ಹೆಗಡೆ, ಆಲ್ಮನೆ



# ಮುನ್ನುಡಿ

ವೇದಗಳಿಂದ ಆರಂಭವಾಗಿ, ಬ್ರಾಹ್ಮಣಗಳಿಂದ ಪುಷ್ಟಿ ಪಡೆದು, ಆರಣ್ಯಕಗಳ ಅನುಬಂಧ ಹೊಂದಿ ಉಪನಿಷತ್ತುಗಳಲ್ಲಿ ಅಂತ್ಯಗೊಳ್ಳುವ ಸಾಹಿತ್ಯ ಪರಂಪರೆಗೆ ಸ್ಥೂಲವಾಗಿ ವೈದಿಕ ಸಾಹಿತ್ಯವೆಂಬ ರೂಢಿ ಇದೆ. ಒಮ್ಮೊಮ್ಮೆ ಬ್ರಾಹ್ಮಣಗಳ ವಸ್ತುವಾಗಬಹುದಾದದ್ದು ಆರಣ್ಯಕಗಳೊಳಗೆ ಚಾಚಿಕೊಂಡಿರುತ್ತದೆ. ಆರಣ್ಯಕಗಳ ವಸ್ತುವೆಂದು ಭಾವಿಸಲಾದದ್ದು ಉಪನಿಷತ್ತುಗಳ ಸಾಮಗ್ರಿಯಾಗಿರುತ್ತದೆ. ಆದ್ದರಿಂದಲೇ ಉಪನಿಷತ್ತುಗಳನ್ನು ವೇದಾಂತ ಎಂದೂ ಕರೆಯಲಾಗುತ್ತದೆ.

ವೇದಗಳು ಐಹಿಕ ಭೋಗ ಭಾಗ್ಯಗಳನ್ನು ಒದಗಿಸುವ ಯಜ್ಞ ಯಾಗಾದಿಗಳ ಕರ್ಮಮಾರ್ಗವನ್ನು ಬೋಧಿಸಿದರೆ, ಉಪನಿಷತ್ತುಗಳು ಆತ್ಯಂತಿಕ ಸತ್ಯವನ್ನು ಅಂದರೆ, ಯಾವುದರಿಂದ ಮಾನವನು ಐಹಿಕ ಬಂಧನದಿಂದ ಬಿಡುಗಡೆ ಪಡೆಯಬಹುದೋ ಅಂತಹ ದಿವ್ಯ ಜ್ಞಾನವನ್ನು ನೀಡುತ್ತವೆ. ಉಪನಿಷತ್ತುಗಳ ಪ್ರಮುಖ ವ್ಯಾಖ್ಯಾನಕಾರರಾದ ಶಂಕರಾಚಾರ್ಯರ ಪ್ರಕಾರ ಯಾರು ವೈದಿಕ ಕರ್ಮಮಾರ್ಗದಲ್ಲಿ ಆಕರ್ಷಣೆಯನ್ನು ಕಳೆದು ಕೊಂಡಿರುವರೋ, ಯಾರು ಐಹಿಕ ಅಥವಾ ಸ್ವರ್ಗಲೋಕದ ಸುಖ ಸಂಪತ್ತುಗಳ ಆಸೆಯನ್ನು ದಾಟಿರುವರೋ ಅಂತಹ ಉನ್ನತ ಹಂತದ ಮಾನವರಿಗೆ ಮಾತ್ರ ಉಪನಿಷತ್ತುಗಳು ಹಿಡಿಸುತ್ತವೆ. ಅಂತಹ ಅರ್ಹ ವ್ಯಕ್ತಿ ಇನ್ನೂ ಬ್ರಹ್ಮಚಾರಿಯಾಗಿರಲಿ, ಗೃಹಸ್ಥನಾಗಿರಲಿ ಇಲ್ಲವೆ ಸನ್ಯಾಸಿಯಾಗಿರಲಿ ಅವನ ಆತ್ಯಂತಿಕ ಬಿಡುಗಡೆಯ ದಾರಿಯನ್ನು ಅವು ತೋರಿಸುತ್ತವೆ. ವೈದಿಕ ಕರ್ಮಗಳನ್ನು ಮಾಡುವವರು ಅವುಗಳನ್ನು ನಿರಾಕರಿಸುವವರಿಗಿಂತ ಕೆಳಸ್ತರದವರು. ವೈದಿಕ ಕರ್ಮಫಲಗಳನ್ನು ಉಪೇಕ್ಷಿಸುವವರು ಮಾತ್ರ ಉಪನಿಷತ್ತುಗಳನ್ನು ಆಲಿಸಲು ಅರ್ಹರಾಗುತ್ತಾರೆ ಎಂಬುದು ಆಚಾರ್ಯರ ಅಭಿಪ್ರಾಯ.

ಉಪನಿಷತ್ತುಗಳಲ್ಲಿ ಬರುವ ಉಪಾಖ್ಯಾನಗಳ ಪ್ರಕಾರ ಅನೇಕ ಬ್ರಾಹ್ಮಣರು ಕ್ಷತ್ರಿಯರ ಬಳಿ ಜ್ಞಾನಾರ್ಜನೆಗಾಗಿ ಶಿಷ್ಯ ವೃತ್ತಿಯನ್ನು ಸ್ವೀಕರಿಸುತ್ತಾರೆ ಎಂಬುದನ್ನು ಗಮನಿಸಿದರೆ ಬ್ರಾಹ್ಮಣ ವಿಚಾರಧಾರೆ ಬರಡಾಗುತ್ತಿದ್ದ ಕಾಲದಲ್ಲಿ ಕ್ಷತ್ರಿಯರ ನೂತನ ಚಿಂತನೆಗಳು ಅವುಗಳನ್ನು

ಅನನ್ಯ ಕೃತಿ. ಅದರ ಏಳು ಅಧ್ಯಾಯಗಳಲ್ಲಿ ಪ್ರಾರಂಭದ ಏಳು ಉಪನಿಷತ್ತುಗಳ ಸಾರವನ್ನು ಸಂಗ್ರಹ ರೂಪದಲ್ಲಿ ಹೇಳುವುದರ ಜೊತೆಗೆ ಅವುಗಳ ಆಳ ಮತ್ತು ವಿಸ್ತಾರಗಳನ್ನು ಹಾಗೂ ಇತಿಮಿತಿಗಳನ್ನು ಲೇಖಕರು ತಮ್ಮದೇ ಆದ ಓದಿನ ಮೂಲಕ ವಿಶ್ಲೇಷಣೆ ಮಾಡಿದ್ದಾರೆ. ಅವರು ಆರಿಸಿಕೊಂಡಿರುವ ವಸ್ತು ಸ್ಥೂಲವಾಗಿ ಆ ಪರವಸ್ತುವನ್ನು ಕುರಿತದ್ದಾದರೂ ಒಳಹೊಕ್ಕು ನೋಡಿದಾಗ ಅದರ ವೈವಿಧ್ಯ ಮತ್ತು ವಿಸ್ತಾರ ನಮಗೆ ಮನವರಿಕೆಯಾಗದಿರದು.

ಹೆಗಡೆಯವರು ತಮ್ಮ ಪ್ರಬಂಧಗಳಲ್ಲಿ ವೇದಾಂತದ ಪಾರಿಭಾಷಿಕ ಪದಜಾಲವನ್ನು ಬಳಸದೆ ತಮ್ಮದೇ ಆದ ಓದಿನಿಂದ ತಾವು ಕಂಡುಕೊಂಡ ಅರ್ಥವನ್ನು ನಿವೇದಿಸಲು ತಮ್ಮದೇ ಆದ ಭಾಷೆಯನ್ನು ಬಳಸಿರುವುದು ಈ ಕೃತಿಯ ಒಂದು ವೈಶಿಷ್ಟ್ಯವಾಗಿದೆ. ಇದರಿಂದ ಇಡೀ ಕೃತಿಗೆ ಒಂದು ನಾವೀನ್ಯತೆ ಮತ್ತು ಸಾರ್ಥಕತೆ ಉಂಟಾಗಿದೆ ಎಂದು ನನ್ನ ಭಾವನೆ.

ಅಲ್ಲದೆ ತಾವು ಆರಿಸಿಕೊಂಡ ಉಪನಿಷತ್ತುಗಳಲ್ಲಿ ಎಲ್ಲೆಲ್ಲಿ ಜೀವ ಪರವಾದ ಹಾಗೂ ಜೀವ ವಿರೋಧಿಯಾದ ನಿಲುವುಗಳು ಒಡಮೂಡಿವೆ ಮತ್ತು ಅವುಗಳಿಂದ ವ್ಯಕ್ತಿಯ ಹಾಗೂ ಸಮಾಜದ ಜೀವನದ ಮೇಲೆ ಆಗುವ ಪರಿಣಾಮಗಳು ಯಾವ ಬಗೆಯವು ಎಂಬ ವಿಶ್ಲೇಷಣೆಯೂ ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ.

ಉಪನಿಷತ್ತುಗಳಂತಹ ಗಂಭೀರ ಕೃತಿಗಳನ್ನು ಅಷ್ಟು ಆಳವಾಗಿ ಅಧ್ಯಯನ ಮಾಡಿರದ ನನ್ನಂತಹವನು ಶ್ರೀ ಆರ್. ಡಿ. ಹೆಗಡೆ, ಆಲ್ಮನೆಯವರ ''ಉಪನಿಷತ್ತುಗಳ ಅರ್ಥಲೋಕ'' ದಂತಹ ವಿಮರ್ಶಾ ಸಂಗ್ರಹಕ್ಕೆ ಮುನ್ನುಡಿ ಬರೆಯಲು ಒಪ್ಪಿಕೊಂಡುದು ಒಂದು ಧಾರ್ಷ್ಟ್ಯವಾಯಿತೇನೋ ಎಂಬ ಅಳುಕು ನನ್ನನ್ನು ಬಾಧಿಸುತ್ತಲೇ ಇದೆ. ಆದರೆ ಆರ್. ಎಸ್. ರಾಜಾರಾಮ್ ಅವರು ನನ್ನ ಮೇಲೆ ತೋರಿದ ಅವ್ಯಾಜ ಪ್ರೀತಿಗೆ ನಾನು ಹಾಗಲ್ಲದೆ ಅನ್ಯ ರೀತಿ ಪ್ರತಿಕ್ರಿಯೆ ತೋರಿಸುವಂತಿರಲಿಲ್ಲ ಎಂದು ಮಾತ್ರ ಹೇಳಬಯಸುತ್ತೇನೆ. ಈ ವಿಚಾರ ಪ್ರಚೋದಕವಾದ ಅಪೂರ್ವ ಕೃತಿಯನ್ನು ಓದುವ ಹಾಗೂ ಮುನ್ನುಡಿ ರೂಪದಲ್ಲಿ ಒಂದೆರಡು ಮಾತುಗಳನ್ನು ಬರೆಯುವ ಅವಕಾಶವನ್ನು ಒದಗಿಸಿಕೊಟ್ಟ ಆರ್. ಡಿ. ಹೆಗಡೆ, ಆಲ್ಮನೆ ಹಾಗೂ ನವಕರ್ನಾಟಕ ಪ್ರಕಾಶನದ ಆರ್. ಎಸ್. ರಾಜಾರಾಮ್ ಅವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಏಪ್ರಿಲ್ 4, 1997 ಬಿ. ವಿ. ವೀರಭದ್ರಪ್ಪ
ದಾವಣಗೆರೆ.

# ಪ್ರಸ್ತಾವನೆ

ಕಳೆದ ಕೆಲವು ವರ್ಷಗಳಿಂದ ನಡೆಸಿಕೊಂಡು ಬಂದ ಉಪನಿಷತ್ತುಗಳನ್ನು ಓದುವ ನನ್ನ ಈ ವ್ರತ ಅವುಗಳನ್ನು ಕುರಿತು ಬರೆದ ಈ ಏಳು ಲೇಖನಗಳ ಸಂಗ್ರಹಕ್ಕೆ ಪ್ರಸ್ತಾವನೆಯನ್ನು ಬರೆಯುವ ಮೂಲಕ ಮುಗಿಯುತ್ತದೆಂದು ನನ್ನ ಭಾವನೆ. ಈ ಪ್ರಸ್ತಾವನೆಯ ಉದ್ದೇಶ ಉಪನಿಷತ್ತುಗಳ ಕುರಿತು ತೀರ್ಮಾನದ ಮಾತನಾಡುವುದಲ್ಲ; ಕೇವಲ ನನ್ನ ಅನಿಸಿಕೆಗಳನ್ನು ದಾಖಲಿಸುವುದು. ಉಪನಿಷತ್ತುಗಳ ಮನೋಧರ್ಮವು ವೇದಕಾಲೀನ ಭಾರತದ ಚಿತ್ರಕ್ಕಿಂತ ತೀರಾ ಭಿನ್ನವಾಗಿರಲಾರದು ಎಂದು ಅಭಿಪ್ರಾಯ ಹೊಂದಿದ್ದ ನಾನು ಈ ಓದಿನಿಂದ ಅದನ್ನು ಸಾಕಷ್ಟು ತಿದ್ದಿಕೊಳ್ಳುವಂತಾಯಿತು.

ಪ್ರಸ್ತುತ ನನ್ನ ಅಭಿಪ್ರಾಯ ಸ್ಥೂಲವಾಗಿ ಹೀಗಿದೆ: ಉಪನಿಷತ್ತುಗಳು ವೇದಕಾಲೀನ ಸಂಸ್ಕೃತಿಯನ್ನು ಮತ್ತು ಜೀವನೋದ್ದೇಶವನ್ನು ಹೊಸ ಒಡಂಬಡಿಕೆಯೊಡನೆ ವಿಮರ್ಶಿಸಿ ನೋಡುತ್ತ ಮುಂದುವರೆಸಿಕೊಂಡು ಹೋಗುತ್ತವೆ. ಇಲ್ಲಿ ವೇದ ಸಂಸ್ಕೃತಿಯ ಬಹು ಮುಖ್ಯ ಅಂಶಗಳನ್ನು ಕೈಬಿಡಲಾಗಿರುವುದೂ ನಿಜ. ಉಪನಿಷತ್ತುಗಳ ಚಟುವಟಿಕೆಯನ್ನು ವೇದ ಸಂಸ್ಕೃತಿಗೆ ಪ್ರತಿಭಟನೆ ಎನ್ನುವುದಕ್ಕಿಂತ 'ಹೊಸ ಒಡಂಬಡಿಕೆ' ಎಂದೇ ಗುರುತಿಸುವುದು ನನಗೆ ಹೆಚ್ಚು ಸಮಂಜಸವಾಗಿ ತೋರುತ್ತದೆ. ವೇದ ಕಾಲದಿಂದ ಉಪನಿಷತ್ತುಗಳವರೆಗಿನ ಅವಧಿಯನ್ನು ಆರಾಧನೆಯ ಯುಗ ವೆಂದೂ ಉಪನಿಷತ್ತುಗಳ ಕಾಲವನ್ನು ಅರಿವಿನ ಯುಗವೆಂದೂ ಬೇರ್ಪಡಿಸಿ ಕಂಡಾಗ ಎರಡನ್ನೂ ಅವುಗಳ ಸಾಮ್ಯದೊಡನೆ ಮತ್ತು ವ್ಯತ್ಯಾಸದೊಡನೆ ಗುರುತಿಸಿದಂತಾಗುವುದು. ವೇದಕಾಲದಲ್ಲಿ, ಬದುಕು ಸಮೂಹ ಹಿತವನ್ನು ಸಾಧಿಸಲು ಸಾಧನವೆನ್ನಿಸಿದ್ದರೆ ಉಪನಿಷತ್ಕಾಲದಲ್ಲಿ ಈ ಕಲ್ಯಾಣಗುಣವು ಹಿಂದೆ ಸರಿದು ವ್ಯಕ್ತಿ ಹಿತವೇ ದೊಡ್ಡದೆನಿಸಿ, ಬದುಕು ಆತನ ಉದ್ಧಾರಕ್ಕೆ ಅಂದರೆ ಆತ್ಮೋದ್ಧಾರಕ್ಕೆ ನಿರ್ದಿಷ್ಟ ಸಾಧನವಾಯಿತು.

ಇಲ್ಲಿ ಈ ಮೇಲಿನ ಹೋಲಿಕೆ ಸರಿ ತಪ್ಪುಗಳ ತೀರ್ಮಾನಕ್ಕಾಗಿ ಅಲ್ಲ, ಉಪನಿಷತ್ತುಗಳು ಹೊಸ ಚಿಂತನೆಗೆ ಮಾಧ್ಯಮವಾದವು ಎಂದು ತಿಳಿಯಲು ಇಷ್ಟು ಸಾಕು. ಆದರೆ ಈ ಚಿಂತನೆಗಳು ಎಂದು ಮತ್ತು ಹೇಗೆ ರೂಪಧಾರಣೆ

ಮಾಡಿದವು ಎಂದು ಕರಾರುವಾಕ್ಕಾಗಿ ನಿರ್ಧರಿಸುವುದು ಅಸಾಧ್ಯ. ಮುಖ್ಯ ಉಪನಿಷತ್ತುಗಳು ಕ್ರಿಸ್ತಪೂರ್ವ ಆರನೆಯ ಶತಮಾನದಲ್ಲಿ ಹಾಗೂ ಅದಕ್ಕೂ ಹಿಂದಿನ ಎರಡು ಶತಮಾನಗಳಲ್ಲಿ ರಚನೆಗೊಂಡಿರಬಹುದು ಎನ್ನುವುದು ಹೆಚ್ಚು ಜನ ವಿದ್ವಾಂಸರಿಗೆ ಒಪ್ಪಿತವಾಗಿರುವ ಸಂಗತಿ. ಮುಕ್ತಿಕ ಉಪನಿಷತ್ತಿನಲ್ಲಿ 108 ಉಪನಿಷತ್ತುಗಳ ಒಂದು ಪಟ್ಟಿಯನ್ನು ಕೊಡಲಾಗಿದೆ. ಇದರಲ್ಲಿರುವ ಮೊದಲ ಹದಿಮೂರು ಉಪನಿಷತ್ತುಗಳಾದ ಈಶ, ಕೇನ. ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ, ಶ್ವೇತಾಶ್ವತರ, ಕೌಶೀತಕೀ ಹಾಗೂ ಮೈತ್ರೇಯಿ ಉಪನಿಷತ್ತುಗಳು ಮಾತ್ರ ಮುಖ್ಯ ಮತ್ತು ಪ್ರಾಚೀನವಾದುವು ಎಂದು ನಂಬಲಾಗುತ್ತದೆ. ಇವುಗಳ ಧೋರಣೆ ಮತ್ತು ಸ್ವಚ್ಛಂದತೆಗಳ ಕಾರಣ ಇತಿಹಾಸಕಾರರು ಇವುಗಳನ್ನು ಕ್ರಿಸ್ತಪೂರ್ವ ಆರನೆಯ ಶತಮಾನಕ್ಕಿಂತ ಹಿಂದಿನವು ಎಂದು ಅಭಿಪ್ರಾಯ ಪಟ್ಟಿರುವುದು ನನಗೂ ಸಹ ಸರಿಯೆಂದು ತೋರಲು ಮತ್ತೊಂದು ಕಾರಣ ಆ ಶತಮಾನದ ಅಕ್ಕ-ಪಕ್ಕದ ಮಣ್ಣಿನ ಗುಣ ಅಂತಹ ಸಾಧ್ಯತೆಯನ್ನು ಒಳಗೊಂಡಿತ್ತು ಎನ್ನುವುದು. ಅದು ಸಾಂಸ್ಕೃತಿಕವಾಗಿ ವೈಚಾರಿಕವಾಗಿ ಮತ್ತು ಧಾರ್ಮಿಕವಾಗಿ ಬಹಳ ಫಲವತ್ತಾದ ಯುಗ. ಅಂದಿನ ಪ್ರಮುಖ ನಾಗರಿಕತೆಗಳು ಇರುವಲ್ಲೆಲ್ಲ ಆಗ ಪ್ರವಾದಿಗಳು ಹಾಗೂ ತತ್ವಜ್ಞಾನಿಗಳು ಕಾಣಿಸಿಕೊಂಡರು. ಆಗ ಹೊಸ ಧರ್ಮಗಳ ಉದಯವಾಯಿತು. ಹೊಸ ಚಿಂತನೆಗಳು ಸುಳ್ಳಿಯತೊಡಗಿದವು. ಗ್ರೀಸ್‌ದೇಶದ ಪೈತಾಗೊರಸ್, ಚೀನಾದ ಕನ್ಫೂಶಿಯಸ್, ಲಾವೋತ್ಸೆ, ಈ ದೇಶದಲ್ಲಿ ಮಹಾವೀರ, ಬುದ್ಧ, ಪರ್ಶಿಯಾದಲ್ಲಿ ಝುರತುಷ್ಟ್ರ – ಹೀಗೆ ಈ ಮಹಾಮಹಿಮರು ತಾವು ಹುಟ್ಟಿದ ನೆಲದಲ್ಲಿ ಹೊಸ ಚಿಂತನೆ, ಹೊಸ ಬೆಳಕು ಮತ್ತು ಅಪೂರ್ವ ಪ್ರಶ್ನೆಗಳನ್ನು ಬಿತ್ತಿದರು. ಇವರು ಬದುಕಿದ ಕಾಲ ಅಂತಿಂಥ ಕಾಲವಲ್ಲ. ಇವರ ನಡುವಿನ ಅಥವಾ ಆಕ್ಕಪಕ್ಕದ ಕಾಲ ಉಪನಿಷತ್ತುಗಳ ಕಾಲ. ಅಂದಿಗೆ ವೈದಿಕ ಸಮಾಜವು 'ಬ್ರಾಹ್ಮಣ' ಮತ್ತು 'ಆರಣ್ಯಕ'ಗಳ ಮೂಲಕ ಸೋಸಿಕೊಳ್ಳುತ್ತ ಬಹುದೂರ ಸಾಗಿಬಂದಿತ್ತು; ಮತ್ತು ಆರಣ್ಯಕಗಳ ಕಾಲದಲ್ಲಿಯೇ ಅವುಗಳ ಕಾಯಿಯೋ ಹೂವೋ ಅಥವಾ ಕಸಿಮಾಡಲಾಯಿತೋ ಎನ್ನುವಂತೆ ಉಪನಿಷತ್ತುಗಳು ಕಾಣಿಸಿಕೊಂಡವು.

ವೇದಗಳಿಂದ ಉಪನಿಷತ್ತುಗಳವರೆಗೆ ಅಂದರೆ ಕ್ರಿಸ್ತಪೂರ್ವ ಆರನೆಯ ಶತಮಾನದವರೆಗಿನ ಧಾರ್ಮಿಕ ಸಾಹಿತ್ಯವನ್ನು 'ವೈದಿಕವಾಙ್ಮಯ' ಎಂದು ಗುರುತಿಸಲಾಗುತ್ತದೆ. ವೇದಕಾಲೀನ ಮನೋಧರ್ಮವು ಎಲ್ಲೆಲ್ಲೂ ಮುಕ್ತಾಗದೆ

ಉಪನಿಷತ್ತುಗಳ ಕಾಲದವರೆಗೆ ಅವ್ಯಾಹತವಾಗಿ ಮುಂದುವರಿಯುತ್ತ ಬಂದಿತು ಎನ್ನುವಂತಿದೆ ಈ ಮಾತು. ಜೊತೆಗೆ, ಉಪನಿಷತ್ತುಗಳನ್ನು 'ವೇದಾಂತ' ಎಂದೂ ಗುರುತಿಸುತ್ತಾರೆ. ಅಂದರೆ ಉಪನಿಷತ್ತುಗಳು ವೈದಿಕ ವಾಙ್ಮಯದ ಕೊನೆಯ ಭಾಗ ಎಂಬ ತಿಳಿವಳಿಕೆಯಿಂದ ಈ ಹೆಸರು ಬಂದಿತು. ವೇದಕಾಲೀನ ಭಾರತದ ಮುಖ್ಯ ಮನಸ್ಸೂ, ಉಪನಿಷತ್ಕಾಲದ ಭಾರತದ ಮುಖ್ಯ ಮನಸ್ಸೂ ಅಖಂಡವಾಗಿ ಒಂದಾಗಿತ್ತು ಎನ್ನುವುದು ಈ ಗ್ರಹಿಕೆಯ ಆಶಯ. ಆದರೆ ನಾನು ಕಂಡುಕೊಂಡಂತೆ ಉಪನಿಷತ್ತುಗಳು ವೇದವಾಙ್ಮಯದ ಯಥಾರ್ಥವಾದ ಮುಂದುವರಿಕೆಯಲ್ಲ. ಆರಣ್ಯಕಗಳ ಕೊನೆಯಲ್ಲೆಲ್ಲೋ ವೈದಿಕ ಪ್ರಜ್ಞೆಯು ಕವಲೊಡೆಯುತ್ತದೆ. ಅಥವಾ ಮಹಾವೀರ ಮತ್ತು ಬುದ್ಧ ಭಾರತದಲ್ಲಿ ಜನಪದದ ಮಾತಾಗತೊಡಗಿದಾಗ ವೈದಿಕ ಪ್ರಜ್ಞೆಯು ಪೊರೆ ಬಿಡುತ್ತ ರೂಪಾಂತರಗೊಳ್ಳುತ್ತದೆ. ಇಷ್ಟಾದರೂ ಸಹ ವೇದಗಳಾಗಲೀ ಉಪನಿಷತ್ತುಗಳಾಗಲೀ ಬರಿಯ ಕನಸುಗಳನ್ನು ಹಾಡಿರಲಿಲ್ಲ. ಅವು ಕಾಲಕಾಲಕ್ಕೆ ಸಮಕಾಲೀನ ಸಂಸ್ಕೃತಿಯನ್ನು ತಿದ್ದುತ್ತ ತಮ್ಮ ಸಮಾಜಕ್ಕೆ ಚೈತನ್ಯವನ್ನು ಎರೆಯುತ್ತ ಬಂದವು. ವ್ಯತ್ಯಾಸವೆಂದರೆ ವೇದಗಳು ತಮ್ಮ ಸಮಾಜದ, ಮಾನವ್ಯದ, ತದ್ರೂಪಿಗಳಾದಂತೆ ಉಪನಿಷತ್ತುಗಳು ಅಂದಿನ ಸಮಾಜದೊಡನೆ ಹೆಜ್ಜೆ-ಹೆಜ್ಜೆಗೂ ಕೊಡು-ಕೊಳ್ಳಲಿಲ್ಲ. ವೇದಗಳು ಸಮಾಜದ ಒಟ್ಟೂ ಪ್ರಜ್ಞೆಗೆ ಆಕಾರ ಕೊಡುವ ಸಮೂಹ ಕೇಂದ್ರವಾಗುಳ್ಳ ರಚನೆಗಳಾದರೆ, ಉಪನಿಷತ್ತುಗಳು ವ್ಯಕ್ತಿಕೇಂದ್ರಿತ ರಚನೆಗಳಾದುದು ಇದಕ್ಕೆ ಕಾರಣ. ಈ ಬದಲಾವಣೆಯನ್ನು ವೈದಿಕ ಸಂಸ್ಕೃತಿಯ ಮುಗ್ಗರಿಕೆ ಅಥವಾ ಅವನತಿ ಎಂದೆಲ್ಲ ಪರಿಗಣಿಸುತ್ತಾರಾದರೂ ಇದನ್ನು ಅಂದಿನ ಹೊಸ ನಿರೀಕ್ಷೆಯ ಯುಗಧರ್ಮವನ್ನಾಗಿ ಕಂಡಾಗ ಹೆಚ್ಚು ಸಮಂಜಸವಾದೀತು.

ಪ್ರತಿಯೊಂದು ಉಪನಿಷತ್ತೂ ಒಂದು ಅಖಂಡ ಮನಸ್ಸು. ಒಬ್ಬ ಋಷಿಯ ಮಹತ್ವಾಕಾಂಕ್ಷೆ, ಸಾಧನೆ ಮತ್ತು ಆಧ್ಯಾತ್ಮಿಕ ಅನುಭವಗಳು ಉಪನಿಷತ್ತಿನ ವಿಷಯ. ಆದರೂ ಉಪನಿಷತ್ತುಗಳು ಭಾರತೀಯರೆಲ್ಲರ ದಾರ್ಶನಿಕ ಚಿಂತನೆಗಳ ಅತ್ಯುತ್ತಮ ಮಾದರಿಗಳು. ಶ್ರೀ ಅರವಿಂದೊ 'ಇವು ಕಲ್ಪನೆಗಳಲ್ಲ, ಅನುಭಾವಿಗಳ ಒಳದನಿಯ ವಚನ' ಎನ್ನುತ್ತಾರೆ. ಅಂದಿನಂತೆ ಇಂದಿಗೂ ಸಹ ಧರ್ಮ, ದರ್ಶನ, ಆಧ್ಯಾತ್ಮಿಕ ವಿಚಾರಗಳಲ್ಲಿ ಈ ದೇಶದಲ್ಲಿ ಉಪನಿಷತ್ತೇ ಪ್ರಮಾಣವಾಕ್ಯ. ವೈದಿಕ ಧರ್ಮದ ಬಾಹ್ಯ ಸಂಕೇತಗಳ ಅತಿ ವಿಜೃಂಭಣೆಗೆ ಪ್ರತಿಕ್ರಿಯೆಯಾಗಿ ತಲೆಯೆತ್ತಿದ ಇವು ಮತ್ತೂ ಅನೇಕ ಹೆಜ್ಜೆ ಮುಂದುವರೆದು ವಿಶ್ವದ ಮೂಲಾಧಾರ, ಬ್ರಹ್ಮದ ಕಲ್ಪನೆ, ಆತ್ಮದ ಕಲ್ಪನೆ,

ಆತ್ಮ-ಬ್ರಹ್ಮ ಸಮೀಕರಣ, ವಾಸ್ತವತಾವಾದಿ ನಿಲುವಿನಿಂದ ಏಕತ್ವದ ಪ್ರತಿಪಾದನೆ ಮಾಯಾವಾದ, ಕರ್ಮಸಿದ್ಧಾಂತ, ನೈತಿಕ ಬದುಕಿನ ಚಿಂತನೆ ಮತ್ತು ನೀತಿಯ ಸ್ವರೂಪ ನಿರ್ಣಯ-ಹೀಗೆ ಹಲವು ಹತ್ತು ಚಿಂತನೆಗಳಿಗೆ ಚಾಲನೆ ನೀಡುತ್ತವೆ. 'ತತ್ವಮಸಿ' ಯಂತಹ ಮಾಯಕವಾಗಿ ಕಾಣುವ ಅನೇಕ ತತ್ವಗಳು ಇಂದಿಗೂ ಕೂಡ ಹಿಂದೂ ಧರ್ಮದ ಪ್ರಾಣ ಮತ್ತು ಸ್ನಾಯುಗಳಾಗಿವೆ. ಉಪನಿಷತ್ತುಗಳನ್ನು ರಚಿಸಿದವರಿಗೆ ಇಂತಹ ತತ್ವಗಳು ಬರೀ ನಂಬುಗೆಗಳಾಗಿರಲಿಲ್ಲ; ಅವರು ನಂಬಿದಂತೆ ನಡೆಯುವ ಸಲುವಾಗಿ ಜೀವನದಲ್ಲಿ ಮಾಗುತ್ತಿದ್ದರು, ನಂಬಿದ್ದನ್ನು ಕಣ್ಣಾರೆ ಕಾಣಲು ಹಂಬಲಿಸುತ್ತಿದ್ದರು. ಪರಿಣಾಮವಾಗಿ ಎಷ್ಟೋ ಶತಮಾನಗಳವರೆಗೆ ಸುಪ್ತವಾಗಿದ್ದ ಭಾರತೀಯರ ಆಧ್ಯಾತ್ಮಿಕ ವ್ಯಕ್ತಿತ್ವವು ಉಪನಿಷತ್ತುಗಳಲ್ಲಿ ಬೀಜರೂಪವಾಗಿ ಧಾರಣೆಗೊಂಡು ನೆರಳಿನಿಂದ ಬೆಳಕಿಗೆ ಬರುತ್ತದೆ. ಈ ಕ್ರಿಯೆ ತೀವ್ರಗೊಳ್ಳುತ್ತ ಬಹುಮುಖಿಯಾಗಿ ಮುಂದೆ ವೈದಿಕ ಸಮಾಜದ ವಾಸ್ತವಗಳನ್ನು ತಿರುವು-ಮುರುವು ಮಾಡಿದ ಜೈನ ಮತ್ತು ಬೌದ್ಧ ಧರ್ಮಗಳಿಗೆ ನೆಲವನ್ನು ಹದಗೊಳಿಸುತ್ತದೆ.

ಆದರೆ ಶ್ರದ್ಧಾವಂತನಿಗೆ ಇದು ಕಂಡು ಬರುವ ರೀತಿ ಬೇರೆ. ವೈದಿಕ ಧರ್ಮದ ಸ್ವರೂಪವನ್ನು ಉಪನಿಷತ್ತುಗಳು ಅಂದಗೆಡಿಸಿದವು ಎಂದರೆ ಅವನಿಗೆ ದಿಗ್ಭ್ರಮೆಯಾಗುತ್ತದೆ. ಅವನು ಜೀವನದಲ್ಲೇ ಆಗಲಿ ವಿಚಾರದಲ್ಲೇ ಆಗಲಿ ಉಪನಿಷತ್ತುಗಳು ವೈದಿಕ ಆಚರಣೆಯ ನೈತಿಕ ಮತ್ತು ಆಧ್ಯಾತ್ಮಿಕ ಒಳರೂಪಗಳು ಎಂದೇ ತಿಳಿದು ನಡೆಯುತ್ತಾನೆ. ಮತ್ತೊಂದು ವಾದ ಹೀಗಿದೆ: ವೈದಿಕ ಯುಗವು ಸ್ವಯಂ ತೃಪ್ತಿಯಿಂದ ಕೂಡಿದ ಉಲ್ಲಾಸಪೂರ್ಣ ಸಮಾಜವಾಗಿತ್ತು. ಇದನ್ನು ಜೋಪಾನನೆ ಮಾಡುವ ಸಲುವಾಗಿ ಅಂದು ಜೀವಂತವಾಗಿದ್ದ ಯಜನಕ್ರಿಯೆಗಳನ್ನು ನೋಡಿದರೆ ಅದಿನ್ನೂ ಒಂದು ಬೃಹತ್ ಜನಪದ ಸಂಸ್ಕೃತಿಯಾಗಿತ್ತೇ ವಿನಾ ಧರ್ಮವಾಗಿ ವಿಕಾಸಗೊಂಡಿದ್ದಂತೆ ತೋರುವುದಿಲ್ಲ. ಒಟ್ಟಿನಲ್ಲಿ, ವೇದಗಳು ಪರಮಪ್ರಮಾಣ, ಪ್ರಶ್ನಾತೀತ ಎನ್ನುವ ದೃಷ್ಟಿಯನ್ನು ಉಪನಿಷತ್ತುಗಳು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ, ಇದು ನಿಜ. ಆದರೂ, ಉಪನಿಷತ್ತುಗಳಿಂದಲೇ ವೇದಗಳು ಸರಿಯಾಗಿ ಅನಾವರಣ ಗೊಂಡವು ಎನ್ನುವುದು ಪರಂಪರಾಗತ ಗ್ರಹಿಕೆ.

* * *

ಹಿಂದೂ ಸಂಪ್ರದಾಯದಲ್ಲಿ ವೇದಗಳು ಕರ್ಮಭಾಗ, ಉಪನಿಷತ್ತುಗಳು ಜ್ಞಾನಭಾಗ. ಈ ವಿಭಜನೆಯನ್ನು ಕರ್ಮಕಾಂಡ, ಜ್ಞಾನಕಾಂಡ ಎಂದೂ

ಉಪನಿಷತ್ತುಗಳ ಕಾಲದವರೆಗೆ ಅವ್ಯಾಹತವಾಗಿ ಮುಂದುವರಿಯುತ್ತ ಬಂದಿತು ಎನ್ನುವಂತಿದೆ ಈ ಮಾತು. ಜೊತೆಗೆ, ಉಪನಿಷತ್ತುಗಳನ್ನು 'ವೇದಾಂತ' ಎಂದೂ ಗುರುತಿಸುತ್ತಾರೆ. ಅಂದರೆ ಉಪನಿಷತ್ತುಗಳು ವೈದಿಕ ವಾಙ್ಮಯದ ಕೊನೆಯ ಭಾಗ ಎಂಬ ತಿಳಿವಳಿಕೆಯಿಂದ ಈ ಹೆಸರು ಬಂದಿತು. ವೇದಕಾಲೀನ ಭಾರತದ ಮುಖ್ಯ ಮನಸ್ಸೂ, ಉಪನಿಷತ್ಕಾಲದ ಭಾರತದ ಮುಖ್ಯ ಮನಸ್ಸೂ ಅಖಂಡವಾಗಿ ಒಂದಾಗಿತ್ತು ಎನ್ನುವುದು ಈ ಗ್ರಹಿಕೆಯ ಆಶಯ. ಆದರೆ ನಾನು ಕಂಡುಕೊಂಡಂತೆ ಉಪನಿಷತ್ತುಗಳು ವೇದವಾಙ್ಮಯದ ಯಥಾರ್ಥವಾದ ಮುಂದುವರಿಕೆಯಲ್ಲ. ಆರಣ್ಯಕಗಳ ಕೊನೆಯಲ್ಲೆಲ್ಲೋ ವೈದಿಕ ಪ್ರಜ್ಞೆಯು ಕವಲೊಡೆಯುತ್ತದೆ. ಅಥವಾ ಮಹಾವೀರ ಮತ್ತು ಬುದ್ಧ ಭಾರತದಲ್ಲಿ ಜನಪದದ ಮಾತಾಗತೊಡಗಿದಾಗ ವೈದಿಕ ಪ್ರಜ್ಞೆಯು ಪೊರೆ ಬಿಡುತ್ತ ರೂಪಾಂತರಗೊಳ್ಳುತ್ತದೆ. ಇಷ್ಟಾದರೂ ಸಹ ವೇದಗಳಾಗಲೀ ಉಪನಿಷತ್ತುಗಳಾಗಲೀ ಬರಿಯ ಕನಸುಗಳನ್ನು ಹಾಡಿರಲಿಲ್ಲ. ಅವು ಕಾಲಕಾಲಕ್ಕೆ ಸಮಕಾಲೀನ ಸಂಸ್ಕೃತಿಯನ್ನು ತಿದ್ದುತ್ತ ತಮ್ಮ ಸಮಾಜಕ್ಕೆ ಚೈತನ್ಯವನ್ನು ಎರೆಯುತ್ತ ಬಂದವು. ವ್ಯತ್ಯಾಸವೆಂದರೆ ವೇದಗಳು ತಮ್ಮ ಸಮಾಜದ, ಮಾನವ್ಯದ, ತದ್ರೂಪಿಗಳಾದಂತೆ ಉಪನಿಷತ್ತುಗಳು ಅಂದಿನ ಸಮಾಜದೊಡನೆ ಹೆಜ್ಜೆ-ಹೆಜ್ಜೆಗೂ ಕೊಡು-ಕೊಳ್ಳಲಿಲ್ಲ. ವೇದಗಳು ಸಮಾಜದ ಒಟ್ಟೂ ಪ್ರಜ್ಞೆಗೆ ಆಕಾರ ಕೊಡುವ ಸಮೂಹ ಕೇಂದ್ರವಾಗುಳ್ಳ ರಚನೆಗಳಾದರೆ, ಉಪನಿಷತ್ತುಗಳು ವ್ಯಕ್ತಿಕೇಂದ್ರಿತ ರಚನೆಗಳಾದುದು ಇದಕ್ಕೆ ಕಾರಣ. ಈ ಬದಲಾವಣೆಯನ್ನು ವೈದಿಕ ಸಂಸ್ಕೃತಿಯ ಮುಗ್ಗರಿಕೆ ಅಥವಾ ಅವನತಿ ಎಂದೆಲ್ಲ ಪರಿಗಣಿಸುತ್ತಾರಾದರೂ ಇದನ್ನು ಅಂದಿನ ಹೊಸ ನಿರೀಕ್ಷೆಯ ಯುಗಧರ್ಮವನ್ನಾಗಿ ಕಂಡಾಗ ಹೆಚ್ಚು ಸಮಂಜಸವಾದೀತು.

ಪ್ರತಿಯೊಂದು ಉಪನಿಷತ್ತೂ ಒಂದು ಅಖಂಡ ಮನಸ್ಸು. ಒಬ್ಬ ಋಷಿಯ ಮಹತ್ವಾಕಾಂಕ್ಷೆ, ಸಾಧನೆ ಮತ್ತು ಆಧ್ಯಾತ್ಮಿಕ ಅನುಭವಗಳು ಉಪನಿಷತ್ತಿನ ವಿಷಯ. ಆದರೂ ಉಪನಿಷತ್ತುಗಳು ಭಾರತೀಯರೆಲ್ಲರ ದಾರ್ಶನಿಕ ಚಿಂತನೆಗಳ ಅತ್ಯುತ್ತಮ ಮಾದರಿಗಳು. ಶ್ರೀ ಅರವಿಂದೊ 'ಇವು ಕಲ್ಪನೆಗಳಲ್ಲ, ಅನುಭಾವಿಗಳ ಒಳದನಿಯ ವಚನ' ಎನ್ನುತ್ತಾರೆ. ಅಂದಿನಂತೆ ಇಂದಿಗೂ ಸಹ ಧರ್ಮ, ದರ್ಶನ, ಆಧ್ಯಾತ್ಮಿಕ ವಿಚಾರಗಳಲ್ಲಿ ಈ ದೇಶದಲ್ಲಿ ಉಪನಿಷತ್ತೇ ಪ್ರಮಾಣವಾಕ್ಯ. ವೈದಿಕ ಧರ್ಮದ ಬಾಹ್ಯ ಸಂಕೇತಗಳ ಅತಿ ವಿಜೃಂಭಣೆಗೆ ಪ್ರತಿಕ್ರಿಯೆಯಾಗಿ ತಲೆಯೆತ್ತಿದ ಇವು ಮತ್ತೂ ಅನೇಕ ಹೆಜ್ಜೆ ಮುಂದುವರೆದು ವಿಶ್ವದ ಮೂಲಾಧಾರ, ಬ್ರಹ್ಮದ ಕಲ್ಪನೆ, ಆತ್ಮದ ಕಲ್ಪನೆ,

ಆತ್ಮ-ಬ್ರಹ್ಮ ಸಮೀಕರಣ, ವಾಸ್ತವತಾವಾದಿ ನಿಲುವಿನಿಂದ ಏಕತ್ವದ ಪ್ರತಿಪಾದನೆ ಮಾಯಾವಾದ, ಕರ್ಮಸಿದ್ಧಾಂತ, ನೈತಿಕ ಬದುಕಿನ ಚಿಂತನೆ ಮತ್ತು ನೀತಿಯ ಸ್ವರೂಪ ನಿರ್ಣಯ-ಹೀಗೆ ಹಲವು ಹತ್ತು ಚಿಂತನೆಗಳಿಗೆ ಚಾಲನೆ ನೀಡುತ್ತವೆ. 'ತತ್ವಮಸಿ' ಯಂತಹ ಮಾಯಕವಾಗಿ ಕಾಣುವ ಅನೇಕ ತತ್ವಗಳು ಇಂದಿಗೂ ಕೂಡ ಹಿಂದೂ ಧರ್ಮದ ಪ್ರಾಣ ಮತ್ತು ಸ್ನಾಯುಗಳಾಗಿವೆ. ಉಪನಿಷತ್ತುಗಳನ್ನು ರಚಿಸಿದವರಿಗೆ ಇಂತಹ ತತ್ವಗಳು ಬರೀ ನಂಬುಗೆಗಳಾಗಿರಲಿಲ್ಲ; ಅವರು ನಂಬಿದಂತೆ ನಡೆಯುವ ಸಲುವಾಗಿ ಜೀವನದಲ್ಲಿ ಮಾಗುತ್ತಿದ್ದರು, ನಂಬಿದ್ದನ್ನು ಕಣ್ಣಾರೆ ಕಾಣಲು ಹಂಬಲಿಸುತ್ತಿದ್ದರು. ಪರಿಣಾಮವಾಗಿ ಎಷ್ಟೋ ಶತಮಾನಗಳವರೆಗೆ ಸುಪ್ತವಾಗಿದ್ದ ಭಾರತೀಯರ ಆಧ್ಯಾತ್ಮಿಕ ವ್ಯಕ್ತಿತ್ವವು ಉಪನಿಷತ್ತುಗಳಲ್ಲಿ ಬೀಜರೂಪವಾಗಿ ಧಾರಣೆಗೊಂಡು ನೆರಳಿನಿಂದ ಬೆಳಕಿಗೆ ಬರುತ್ತದೆ. ಈ ಕ್ರಿಯೆ ತೀವ್ರಗೊಳ್ಳುತ್ತ ಬಹುಮುಖಿಯಾಗಿ ಮುಂದೆ ವೈದಿಕ ಸಮಾಜದ ವಾಸ್ತವಗಳನ್ನು ತಿರುವು-ಮುರುವು ಮಾಡಿದ ಜೈನ ಮತ್ತು ಬೌದ್ಧ ಧರ್ಮಗಳಿಗೆ ನೆಲವನ್ನು ಹದಗೊಳಿಸುತ್ತದೆ.

ಆದರೆ ಶ್ರದ್ಧಾವಂತನಿಗೆ ಇದು ಕಂಡು ಬರುವ ರೀತಿ ಬೇರೆ. ವೈದಿಕ ಧರ್ಮದ ಸ್ವರೂಪವನ್ನು ಉಪನಿಷತ್ತುಗಳು ಅಂದಗೆಡಿಸಿದವು ಎಂದರೆ ಅವನಿಗೆ ದಿಗ್ಭ್ರಮೆಯಾಗುತ್ತದೆ. ಅವನು ಜೀವನದಲ್ಲೇ ಆಗಲಿ ವಿಚಾರದಲ್ಲೇ ಆಗಲಿ ಉಪನಿಷತ್ತುಗಳು ವೈದಿಕ ಆಚರಣೆಯ ನೈತಿಕ ಮತ್ತು ಆಧ್ಯಾತ್ಮಿಕ ಒಳರೂಪಗಳು ಎಂದೇ ತಿಳಿದು ನಡೆಯುತ್ತಾನೆ. ಮತ್ತೊಂದು ವಾದ ಹೀಗಿದೆ: ವೈದಿಕ ಯುಗವು ಸ್ವಯಂ ತೃಪ್ತಿಯಿಂದ ಕೂಡಿದ ಉಲ್ಲಾಸಪೂರ್ಣ ಸಮಾಜವಾಗಿತ್ತು. ಇದನ್ನು ಜೋಪಾನನೆ ಮಾಡುವ ಸಲುವಾಗಿ ಅಂದು ಜೀವಂತವಾಗಿದ್ದ ಯಜನಕ್ರಿಯೆಗಳನ್ನು ನೋಡಿದರೆ ಅದಿನ್ನೂ ಒಂದು ಬೃಹತ್ ಜನಪದ ಸಂಸ್ಕೃತಿಯಾಗಿತ್ತೇ ವಿನಾ ಧರ್ಮವಾಗಿ ವಿಕಾಸಗೊಂಡಿದ್ದಂತೆ ತೋರುವುದಿಲ್ಲ. ಒಟ್ಟಿನಲ್ಲಿ, ವೇದಗಳು ಪರಮಪ್ರಮಾಣ, ಪ್ರಶ್ನಾತೀತ ಎನ್ನುವ ದೃಷ್ಟಿಯನ್ನು ಉಪನಿಷತ್ತುಗಳು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ, ಇದು ನಿಜ. ಆದರೂ, ಉಪನಿಷತ್ತುಗಳಿಂದಲೇ ವೇದಗಳು ಸರಿಯಾಗಿ ಅನಾವರಣ ಗೊಂಡವು ಎನ್ನುವುದು ಪರಂಪರಾಗತ ಗ್ರಹಿಕೆ.

* * *

ಹಿಂದೂ ಸಂಪ್ರದಾಯದಲ್ಲಿ ವೇದಗಳು ಕರ್ಮಭಾಗ, ಉಪನಿಷತ್ತುಗಳು ಜ್ಞಾನಭಾಗ. ಈ ವಿಭಜನೆಯನ್ನು ಕರ್ಮಕಾಂಡ, ಜ್ಞಾನಕಾಂಡ ಎಂದೂ

ಹೆಸರಿಸಲಾಗುತ್ತದೆ. ಆಚರಣೆಯಿಂದ ಅರಿವಿನತ್ತ ಹೊರಳುವ ಸ್ಥಿತ್ಯಂತರದ ಕಲ್ಪನೆ ಈ ವಿಭಜನೆಯಲ್ಲಿದೆ.

ಹಾಗಾದರೆ ಉಪನಿಷತ್ತುಗಳು ಹೇಳುವುದಾದರೂ ಏನು? ಆತ್ಮಜ್ಞಾನವೇ ದೊಡ್ಡದು; ಪರಮಾತ್ಮ ಬೇರೆ ಅಲ್ಲ, ಜೀವಾತ್ಮ ಬೇರೆ ಅಲ್ಲ, ಸತ್ ಎಂದರೆ ಸತ್ಯ. ಸತ್ಯವೇ ಪರಮಾತ್ಮ. ಸತ್ ಅಂದರೆ ಹಿರಿದಾದ್ದು, ಮಿಗಿಲಾದುದು ಎಲ್ಲಕ್ಕಿಂತ ದೊಡ್ಡದು. ಅದೇ ಭೌಮ. ಸತ್ ನೀನು ನಾನು ಎಲ್ಲ; ಅದೇ ಸುಖ. ''ಯೋ ವೈ ಭೂಮಾ ತತ್ ಸುಖಮ್.'' ಅದನ್ನರಿಯುವುದೇ ಪರವಿದ್ಯೆ. ಪರವಿದ್ಯೆ ಆತ್ಮವಿದ್ಯೆ. ಸತ್ಯವನ್ನರಿತು ಅರಿವಿನಂತೆ ಬಾಳುವುದು ಒಂದು ಕ್ರಮ. ಅದು ಶ್ರೇಯಸ್ಸು. ಮಾಯೆಯೊಳಗೆ ಮಹದಾನಂದಪಡುತ್ತ ಬದುಕುವುದು ಮತ್ತೊಂದು ಕ್ರಮ. ಅದು ಪ್ರೇಯಸ್ಸು. ಶ್ರೇಯಸ್ಸು ಸಹಬಾಳ್ವೆಯಲ್ಲೂ ಸಾಧಿಸಬಹುದಾದ್ದು; ಒಂಟಿತನದ ವ್ರತದಲ್ಲಿಯೂ ಕೈಗೆಟುಕಬಹುದಾದ್ದು. ಸಂಸಾರಿಗೆ ಹೇಗೋ ಹಾಗೆಯೇ ಪರಿವ್ರಾಜಕನಿಗೂ ಶ್ರೇಯಸ್ಸು ಲಭ್ಯ. ಇದಕ್ಕಾಗಿ ಮನವು ತೈಲಧಾರೆಯಂತೆ ಅದರತ್ತ ಹರಿಯತೊಡಗಿ ಪ್ರಜ್ಞೆಯು ಜ್ವಾಲೆಯಾಗಿ ಉರಿಯುತ್ತಿರಬೇಕು. ಅದು ಭೇದವನ್ನು ಕಾಣದ ಸ್ಥಿತಿ. ಅಲ್ಲಿ ಪರಮಾತ್ಮ ಬೇರೆ ಅಲ್ಲ ಜೀವಾತ್ಮ ಬೇರೆ ಅಲ್ಲ. ಬದುಕಿನ ಹಂಗನ್ನು ಉಳಿಸಿಕೊಂಡವನು ಪ್ರೀತಿಯೆಂಬ ಬಂಧನಕ್ಕಾಗಿ ಹಾತೊರೆಯುತ್ತಾನೆ. ಅದಿಲ್ಲದಿರುವುದು ಮೋಕ್ಷಕ್ಕೆ ಸಾಧನ. ಬಂಧನ ಮತ್ತು ಮೋಕ್ಷದ ಕಲ್ಪನೆ ಕಠೋಪನಿಷತ್ತಿನದು. ಹೀಗೆ ವೇದಾಂತದರ್ಶನದ ಮುಖ್ಯ ವಿಚಾರಧಾರೆಯು ಕಠೋಪನಿಷತ್ತಿನಿಂದ ಉಕ್ಕಿ ಹೊರ ಚೆಲ್ಲಿದಂತಿದೆ. ಆಧ್ಯಾತ್ಮಿಕ ನಂಬಿಗೆಯನ್ನು ಆವಾಹನೆ ಮಾಡಿಕೊಳ್ಳುವ ವಿಧಿ-ವಿಧಾನಗಳನ್ನು ನಿಷ್ಠುರವಾದ ನಿಲುವಿನಿಂದ ಬೋಧಿಸುವ ಕಠೋಪನಿಷತ್ತನ್ನು ''ಕತ್ತಲೆಯಲ್ಲಿ ಬೆಳಕಿನ ಕಿಡಿ'' ಎಂದು ಬಣ್ಣಿಸಲಾಗುತ್ತದೆ. ಎಲ್ಲ ಉಪನಿಷತ್ತುಗಳು ಹೊರಳುವುದು ಒಂದೇ ದಿಕ್ಕಿಗೆ. ಅದು 'ಅಧ್ಯಾತ್ಮ' ಎಂಬ ದಿಕ್ಕು. ಆದರೆ ಬದುಕಿನಲ್ಲಿ ಅದನ್ನು ತೊಡಗಿಸುವ ಕ್ರಮದ ಬಗ್ಗೆ ಉಪನಿಷತ್ತುಗಳ ನಡುವೆ ಒಮ್ಮತವಿಲ್ಲ. ಬದುಕಿನ ಒಡಪನ್ನು ಅರಿತು ಅದನ್ನು ಪ್ರೀತಿಸಬೇಕು ಎನ್ನುವುದು ಮುಂಡಕೋಪನಿಷತ್ತು. ಒಂದು ಚೂರು ಸ್ವಾರ್ಥ ಒಂದಿಷ್ಟು ತನ್ಮಯತೆ ಹಾಗೂ ಸಂಪನ್ನತೆಯನ್ನು ಉಳಿಸಿಕೊಳ್ಳಬೇಕೆಂಬ ಲಹರಿ ಜೀವನದಲ್ಲಿ ಉಂಟಾದರೆ ಅದು ಅಧ್ಯಾತ್ಮ ವಿರೋಧಿಯಲ್ಲ ಎನ್ನುವುದು ತೈತ್ತಿರೀಯೋಪನಿಷತ್ತು. ಇಲ್ಲಿ, ಶಿಷ್ಯರು ತನಗೆ ಪ್ರಿಯವಾದ ಸಂಪತ್ತನ್ನು ತಂದುಕೊಡಲಿ ಎಂದು ಆಚಾರ್ಯ ಬಯಸುತ್ತಾನೆ. ಅನ್ನ ವರ್ಧಿಸಬೇಕು, ಅನ್ನವನ್ನು

ಹೀಗಳೆಯಬಾರದು, ಅನ್ನ ಸಮ್ಯ ಕಾಳಜಿಯಾಗಬೇಕು; ಅನಂತರ ಆನಂದ ಪ್ರಾಪ್ತವಾದರೆ ಅದು ಪರಬ್ರಹ್ಮ. ''ಆನಂದೋ ಬ್ರಹ್ಮೇತಿ ವ್ಯಜಾನಾತ್''. ಇಲ್ಲಿ ಸಫಲನಾಗಿ ಆಮೇಲೆ ಅಲ್ಲಿಗೆ ತಕ್ಕವನಾಗು ಎನ್ನುವುದು ತೈತ್ತಿರೀಯದ ಬೋಧನೆ. ಹಿಂದೂ ಧರ್ಮವನ್ನು ವಿಚಾರವಾಗಿಯೋ ನಂಬುಗೆಯಾಗಿಯೋ ಪಡೆದುಬಂದಿರುವ ನಾವೆಲ್ಲ ಇದನ್ನು ತಿಳಿದಿದ್ದೇವೆ: ಎಲ್ಲ ಉಪನಿಷತ್ತುಗಳಿಗೂ ಒಂದಲ್ಲ ಒಂದು ಹಂತದಲ್ಲಿ, ಛಾಂದೋಗ್ಯೋಪನಿಷತ್ತು ಹೇಳುವ 'ತತ್ತ್ವಮಸಿ' – 'ಅದು ನೀನೇ' – ಎನ್ನುವ ದಾರ್ಶನಿಕ ದೃಷ್ಟಿ ಮಾನ್ಯವಾಗಿತ್ತು.

ಈ ಪರಿಚಯವು ಕಡಲಿನ ಅಗಾಧತೆಯನ್ನು ಒಂದೆರಡು ಬಿಂದುಗಳಲ್ಲಿ ತೋರಿಸುವ ಪ್ರಯತ್ನ ಮಾತ್ರ.

*　　*　　*

ಈ ಲೇಖನಗಳ ಸಂಗ್ರಹಕ್ಕೆ 'ಉಪನಿಷತ್ತುಗಳ ಅರ್ಥಲೋಕ' ಎಂದು ಹೆಸರು ಕೊಟ್ಟಿದ್ದೇನೆ. ಆದರೆ ಈಶ, ಕೇನ, ಕಠ, ಮುಂಡಕ, ಐತರೇಯ, ತೈತ್ತಿರೀಯ ಮತ್ತು ಛಾಂದೋಗ್ಯ ಈ ಏಳು ಉಪನಿಷತ್ತುಗಳನ್ನು ಮಾತ್ರ ಈ ಓದಿನ ಶಿಸ್ತಿಗೆ ಅಳವಡಿಸಿಕೊಂಡಿದ್ದೇನೆ. ಪ್ರಶ್ನ ಮಾಂಡೂಕ್ಯ, ಬೃಹದಾರಣ್ಯಕ ಮತ್ತು ಶ್ವೇತಾಶ್ವತರದಂತಹ ಮುಖ್ಯ ಉಪನಿಷತ್ತುಗಳನ್ನು ಇಲ್ಲಿ ಕೈಬಿಡಲು ವಿಶೇಷ ಕಾರಣಗಳಿಲ್ಲ. ಆದರೆ ಬೃಹದಾರಣ್ಯಕದ ನನ್ನ ಅಧ್ಯಯನವನ್ನು ಇಲ್ಲಿ ಸೇರಿಸಲು ಸಾಧ್ಯವಾಗಿದ್ದರೆ ಈ ಸಂಗ್ರಹಕ್ಕೆ ಇನ್ನೂ ಹೆಚ್ಚಿನ ಸಮಗ್ರತೆ ಬರುತ್ತಿತ್ತು. ಬೃಹದಾರಣ್ಯಕದ ವ್ಯಾಪ್ತಿ, ವಿಷಯ ವೈವಿಧ್ಯ, ಗಾತ್ರಗಳಿಂದಾಗಿ ಅದನ್ನು ಚಿಕ್ಕದಾಗಿ ನಿರೂಪಿಸಿ ಲೇಖನವಾಗಿಸುವುದು ಸಲ್ಲದ ಮಾತೆಂದು ಆಗ ಅನಿಸಿದ್ದು ನಿಜ.

ವೇದಕಾಲೀನ ಮನೋಧರ್ಮದಿಂದ ಹೊರಳಿಕೊಂಡ ಉಪನಿಷತ್ತುಗಳ ಪ್ರವೃತ್ತಿಯಲ್ಲಿ ಹೊಸ ಒಡಂಬಡಿಕೆಯೊಂದು ಕಂಡಿರುವುದೇ ಈ ಲೇಖನಗಳನ್ನು ಬರೆಯಲು ನನಗೆ ಪ್ರೇರಣೆಯಾಯಿತು. ಉದ್ದೇಶ ಈ ಒಡಂಬಡಿಕೆಯ ಸ್ವರೂಪವನ್ನು ವಿವರವಾಗಿ ನೋಡುವುದು. ಈ ನನ್ನ ಅಧ್ಯಯನಕ್ಕೆ ಸಮಗ್ರತೆ ಬಂದಿದೆ ಎಂದು ನಾನು ಭಾವಿಸುವುದಿಲ್ಲ. ಅದು ಉದ್ದೇಶವೂ ಅಲ್ಲ. ಏಕೆಂದರೆ ಇವು ಪ್ರಸ್ತಾಪಿಸುವ ಆಧ್ಯಾತ್ಮಿಕ ವಿಷಯಗಳಿಂದ ನಾನು ದೂರ ಉಳಿದಿದ್ದೇನೆ. ಓದುವ ಈ ಕ್ರಮವನ್ನು ಅನುಸರಿಸಿರದಿದ್ದರೆ ಉಪನಿಷತ್ತುಗಳ ತೀವ್ರ ಆಧ್ಯಾತ್ಮಿಕತೆಯಲ್ಲಿ ಎಷ್ಟನ್ನು ನಾವೇ ಆವಾಹಿಸಿಕೊಂಡದ್ದು ಎಷ್ಟು ಅಲ್ಲಿ

ಉಕ್ತವಾದದ್ದು ಎನ್ನುವುದು ವಿಶದವಾಗುತ್ತಿರಲಿಲ್ಲವೇನೋ.

ಉಪನಿಷತ್ತುಗಳೆಲ್ಲ ನಾರಾಸಗಟಾಗಿ ನಿಷ್ಠುರವಾಗಿ ಜೀವ ವಿರೋಧಿ ಆಧ್ಯಾತ್ಮಿಕ ಚಿಂತನೆಗಳಲ್ಲ. ಜೀವನಕ್ಕೆ ನೆರವಾಗದ ನಿಷ್ಠುರ ಧಾರ್ಮಿಕ ರೀತಿಯದು ಕಠ ಮಾತ್ರ. ಈಶಾವಾಸ್ಯದ ಅನುಭಾವ ಸಂಪನ್ನ ಕಾಳಜಿಯಾಗಲೀ ಛಾಂದೋಗ್ಯದಲ್ಲಿ ದಾಖಲಾದ ಗ್ಲಾವನ ಸರ್ವೋದಯದ ದೃಷ್ಟಿಯಾಗಲೀ ಉದ್ದಾಲಕನು ತಿಳಿಸುವ ''ತತ್ತ್ವಮ್ ಅಸಿ'' ಎಂಬ ಧಾರ್ಮಿಕ ಬೋಧವಾಗಲೀ ಇಂದೂ ಸಹ ಒಬ್ಬ ನೀತಿವಂತನ ಎದೆ ಮುಟ್ಟಿದರೆ ಅಲ್ಲಿ ಬೇರೂರಿದ ಧರ್ಮ ಅದು. ಮುಂಡಕ, ಈಶಾವಾಸ್ಯ, ಛಾಂದೋಗ್ಯ ಮತ್ತು, ತೈತ್ತಿರೀಯ ಉಪನಿಷತ್ತುಗಳ ಭಾಷೆ ಮಾಯಕ ಶಕ್ತಿ ಪಡೆದದ್ದರಿಂದ ಆ ಮನೋಧರ್ಮವು ಮಾನವೀಯ ಗುಣವುಳ್ಳವರೆಲ್ಲರ ಸಂಕಲ್ಪದಲ್ಲಿ ಊರಿ ಬೇರುಕೊಟ್ಟು ಬೆಳೆದು ಫಲಕಾರಿಯಾಗುವ ಗುಣ ಪಡೆಯುತ್ತದೆ. ನಮ್ಮ ಸಂಕಲ್ಪ ಶಕ್ತಿಯನ್ನೂ ಮೀರಿ ಕೈಯೊಡ್ಡಿ ನಿಲ್ಲುವುದು ಕಠೋಪನಿಷತ್ತು. ವೈದಿಕ ಸಂಪ್ರದಾಯದ ನೆರಳಿಲ್ಲದೆ ಬೆಳೆದವನಿಗೆ ಕಠವು ವ್ಯರ್ಥತೆಯ ಧ್ಯಾನದಂತೆ ತೋರಲು ಇದೇ ಕಾರಣ. ಇದು ನೆಲದ ಮೇಲಿನ ಹೆಜ್ಜೆಯನ್ನು ಕಿತ್ತು ಆಕಾಶದಲ್ಲಿ ಕೈಯೂರಿ ನಿಲ್ಲಬೇಕೆನ್ನುತ್ತದೆ.

ಇಲ್ಲಿ ಉಪನಿಷತ್ತುಗಳನ್ನು ಓದಿದ ರೀತಿ ಹೇಗೆಂದರೆ, ಉದಾಹರಣೆಗೆ – ಮನುಷ್ಯ ಸಂಕಲ್ಪಕ್ಕೆ ದಾಟಿ ಬರಬಹುದಾದ ಈಶಾವಾಸ್ಯವನ್ನು ನಾನು ಭಾವ ಗೀತೆಯ ಉದ್ದೀಪನದಲ್ಲಿ ಓದಿದ್ದೇನೆ. ಈ ಅಧ್ಯಯನದಿಂದ ಈಶಾವಾಸ್ಯ ದೊಳಗಿನ ಫಲವನ್ನು ಕಾಣಬೇಕಾದರೆ ಹೀಗೆ ಅಂಗುಷ್ಠದ ಮೇಲೆ ಎತ್ತರಿಸಿ ನಿಲ್ಲುವುದು ಅನಿವಾರ್ಯವಾಯಿತು. ಋಷಿಯ ಮನಸ್ಸು ಸಮಗ್ರವಾಗಿ ತೊಡಗಿರುವ ಈ ಉಪನಿಷತ್ತು ಸಾಕ್ಷಾತ್ಕಾರದ ರೀತಿಯದು. ಇದಕ್ಕಾಗಿ ಸಂದರ್ಭವೊಂದನ್ನು ಆಗು ಮಾಡಿಕೊಂಡು, ಹುಡುಕಾಟದ ಜಿದ್ದಿನಿಂದ, ಓದಿದ ಕಾರಣ ನನಗೆ ಲಾಭವಾಗಿದೆ ಎಂದುಕೊಂಡಿದ್ದೇನೆ. ಇಲ್ಲಿ ಲಭ್ಯವಾದುದನ್ನೇ ಸದ್ಯದ ಲೇಖನಗಳಲ್ಲಿ ತೋರಿಸಲು ಯತ್ನಿಸಿದ್ದೇನೆ. ಅಡಕವಾಗಿ ಕಂಡುದನ್ನು ಬೆಳಕಿನಲ್ಲಿ ಹಿಗ್ಗಿಸಿ ಹಿಡಿಯುವುದು, ಸೊಕ್ಕಿನಿಂತ ವ್ಯರ್ಥಮಾತುಗಳನ್ನು ಹಿನ್ನೆಲೆಗೆ ನೂಕುವುದು, ಅದು ಬಗ್ಗಬೇಕಾದ ಕಡೆ ಬಾಗಿಸಿಯೋ ಏರಬೇಕಾದ ಕಡೆ ಎತ್ತರಿಸಿಯೋ ನೋಡುವುದು ಈ ಪ್ರಯತ್ನ.

ಇದನ್ನೇ ಅನುಸರಿಸಿದ್ದರಿಂದ ನನಗೆ ಈಶಾವಾಸ್ಯದಂತೆ ಕೇನೋಪ ನಿಷತ್ತೂ ಸಹ ದಕ್ಕಿದೆ. ಸಹಬಾಳುವೆಯನ್ನು ಆಧ್ಯಾತ್ಮಿಕ ಅನುಭವಕ್ಕೆ ಸಾಧನವನ್ನಾಗಿ ಬಗೆಯುವ ಕೇನೋಪನಿಷತ್ತು ಶುಭ ನುಡಿಯುವ

ಉಪನಿಷತ್ತು. ಆದರೆ ಪೈರಿನ ಬುಡಕ್ಕೆ ನುಗ್ಗಿದ ಬಿರುಗಾಳಿಯಂತೆ ಕಠವು ತೀವ್ರ ಆಧ್ಯಾತ್ಮಿಕತೆಯ ಪರಲೋಕವನ್ನು ಕನವರಿಸುವ ಹೊಸ ಭೂಮಿಕೆಯಿಂದ ಈಶ ಮತ್ತು ಕೇನಕ್ಕೆ ಸವಾಲಾಗುತ್ತದೆ. ಮುಂದೆ ಭಗವದ್ಗೀತೆಯಲ್ಲಿ ಮತ್ತು ವೇದಾಂತದರ್ಶನದ ಆಧಾರ ತತ್ವಗಳಲ್ಲಿ, ಎಲ್ಲೆಂದರಲ್ಲಿ ಕಠದ ಆಧ್ಯಾತ್ಮಿಕ ಲಹರಿಯು ಹರಡಿ ಹಿಂದೂ ಧರ್ಮದ ಮುಖ್ಯ ಅರ್ಥವಾಗಿ ಸೇರುವುದರಿಂದ ಯಶಸ್ಸಿನ ಲೆಕ್ಕಾಚಾರದಲ್ಲಿ ಇದು ದೊಡ್ಡದು. ಇದು ಹೇಗೆ ಸಾಧ್ಯವಾಯಿತು ಎಂದು ಪ್ರಶ್ನಿಸಿದರೆ ಸರಳ ಉತ್ತರಗಳಿಲ್ಲ, ಕಠವು ಮುಂದಿಡುವ ಪುನರ್ಜನ್ಮ, ಪರಲೋಕ ಮತ್ತು ಮೃತ್ಯುಭೀತಿಯ ಕಲ್ಪನೆಗಳು ಅದನ್ನು ಮುನ್ನುಗ್ಗಿಸಿರಬಹುದು.

ಆದರೆ ಕಠೋಪನಿಷತ್ತಿನ ಪರಲೋಕೈಕ ದೃಷ್ಟಿಯ ಆಧ್ಯಾತ್ಮಿಕ ಸಿದ್ಧಾಂತಗಳಿಗೆ ತಕ್ಷಣ ಮನ್ನಣೆ ಸಿಕ್ಕಿರಲಿಲ್ಲ. ಇದರ ಪುರಾವೆಗಳು ಮುಂಡಕೋಪನಿಷತ್ತಿನಲ್ಲಿವೆ. ಕಠದ ಗಾಳಿ ಬೀಸುತ್ತಿರುವಾಗ ಕೂಡ ಮುಂಡಕದ ಋಷಿಗೆ ಧ್ಯಾನದಲ್ಲಿ ಕಂಡದ್ದು ಸುಂದರವಾದ ರೆಕ್ಕೆಗಳುಳ್ಳ, ಸಖೀಭಾವದಿಂದ ಮರವನ್ನಾಶ್ರಯಿಸಿ ಕುಳಿತ ಜೋಡಿ ಹಕ್ಕಿಗಳು. ಋಷಿ ''ದ್ವಾ ಸುಪರ್ಣಾ ಸಯುಜಾ ಸಖಾಯೌ'' ಎಂದು ಹಾಡುತ್ತ ಆ ನೋಟದಲ್ಲಿ ತನ್ಮಯನಾಗುತ್ತಾನೆ. ಪ್ರಕೃತಿಯ ಪ್ರತಿಮೆಯಲ್ಲಿ ಋಷಿಗೆ ಸಮನ್ವಯದ – ಬದುಕಿಗೆ ಒಗ್ಗಿಕೊಂಡ ಅಧ್ಯಾತ್ಮದ ದರ್ಶನವಾಗುತ್ತದೆ. ಮುಂಡಕವನ್ನೇ ವಿಸ್ತರಿಸಿ ಮಾಡಿದ ಶಿಲ್ಪದಂತಿದೆ ತೈತ್ತಿರೀಯೋಪನಿಷತ್ತು. ದೇವರ ಭೀತಿ ಯಿಂದಾಗಲೀ ದೇವರಿಲ್ಲದ ಭೀತಿಯಿಂದಾಗಲೀ ಮುಕ್ತವಾದ ತೈತ್ತಿರೀಯವು ಒಂದರ್ಥದಲ್ಲಿ ವ್ಯಕ್ತಿವಾದಿ ಉಪನಿಷತ್ತು. ಇದರಲ್ಲಿ ಬಯಕೆಗಳನ್ನು ಮೌಲ್ಯಗಳನ್ನಾಗಿಸಿ ರೂಪಾಂತರಿಸುವ ಋಷಿ ಈತ. ಸ್ವಚ್ಛಂದತೆಯಿಲ್ಲದ ಐಹಿಕ ಸುಖ ಇವನ ಗುರಿ. ಅನ್ನವನ್ನು ಸ್ತುತಿಸುವ, ಅನಂತರ ಅನ್ನದಿಂದಲ್ಲದ ಆನಂದವನ್ನು ಸ್ತುತಿಸುವ, ಈ ಉಪನಿಷತ್ತು ಕಠದ ಮುಖಕ್ಕೆ ಗುದ್ದಿದಂತಿದೆ.

ಚಿಂತನೆಯ ಸ್ವಾತಂತ್ರ್ಯದೊಡನೆ ಚಿಂತನೆಯ ದುರ್ಬಳಕೆಯನ್ನೂ ಉಪನಿಷತ್ತಿನ ಕಾಲ ತಂದುಕೊಟ್ಟಿತು ಎನ್ನಲು ಐತರೇಯ ಉಪನಿಷತ್ತು ಸಾಕ್ಷಿ. ಇದು ಭೋಗಕ್ಕಾಗಿ ಭೂಮಿ ಎನ್ನುವ ಸಿದ್ಧಾಂತವನ್ನು ಮುಂದಿಟ್ಟು ಕೊಂಡು ಮನುಷ್ಯನನ್ನು ಸೃಷ್ಟಿಯ ಕೇಂದ್ರವನ್ನಾಗಿಸುತ್ತದೆ. ಆದರೆ ಐತರೇಯವು ಮುಂದೆಲ್ಲೂ ಮಾರ್ದನಿಸುವುದಿಲ್ಲ. ಐತರೇಯದ ಸ್ವಾರ್ಥ ಚಿಂತನೆಯನ್ನು ಮೆಟ್ಟಿ ನಿಲ್ಲಲೋ ಎನ್ನುವಂತೆ ಎಲ್ಲವನ್ನು ಬೊಟ್ಟುಮಾಡಿ ತೋರಿಸುತ್ತ 'ತತ್ತ್ವಮಸಿ' – ಅದು ನೀನೇ ಆಗಿರುವೆ – ಎನ್ನುತ್ತದೆ ಛಾಂದೋಗ್ಯ ಉಪನಿಷತ್ತು.

ಛಾಂದೋಗ್ಯದ ಸಂದರ್ಭದಲ್ಲಿ ನನ್ನ ಅಧ್ಯಯನದ ರೀತಿ ಬದಲಾಗಿದೆ. ನಾನು ಅನುಸರಿಸಿದ ಕ್ರಮ ಕೂಡ ಬೇರೆ. ಛಾಂದೋಗ್ಯದ ತಾತ್ವಿಕ ವಿಚಾರಗಳೆಲ್ಲ ಅಲ್ಲಿರುವ ಉಪಾಖ್ಯಾನಗಳಲ್ಲಿ ಅಡಕವಾಗಿವೆ ಎಂದು ಮನಗಂಡು ಉಪಾಖ್ಯಾನಗಳನ್ನು – ಮಹತ್ವದ ಹನ್ನೊಂದು ಉಪಾಖ್ಯಾನ ಗಳನ್ನು – ಮಾತ್ರ ಇಲ್ಲಿ ಅವಲೋಕನ ಮಾಡಿದ್ದೇನೆ. ಈ ಉಪಾಖ್ಯಾನಗಳು ಅನುವಾದದಂತಿರುವ ವಿಮರ್ಶೆಗಳು. ಇಲ್ಲಿ ಮೂಲವನ್ನು ಅರ್ಥೈಸುತ್ತ ಮೂಲದಂತೆ ನುಡಿಯುವುದು ನಾನು ಅನುಸರಿಸಿದ ಕ್ರಮ.

* * *

ತಮ್ಮ ಸಮಕಾಲೀನ ಸಮಾಜದ ವಿಷಯದಲ್ಲಿ ಉಪನಿಷತ್ತುಗಳ ಮೌನ ಅಸಾಧಾರಣವಾದುದು. ವರ್ಣಾಶ್ರಮದ ಕುರಿತು, ಆರ್ಯ-ಅನಾರ್ಯರ ನಡುವಿನ ಘರ್ಷಣೆಯ ವಿಷಯದಲ್ಲಿ, ಅಂದಿನ ಸಮಾಜದ ಸ್ವರೂಪ ವ್ಯವಸ್ಥೆ, ಅಸಮಾಧಾನಗಳ ಬಗ್ಗೆ, ರಾಜಕೀಯ ವ್ಯವಸ್ಥೆಯ ಕುರಿತು, ಉಪನಿಷತ್ತುಗಳಲ್ಲಿ ಉಲ್ಲೇಖ ತುಂಬ ಕಡಿಮೆ. ಆದರೆ ಅಲ್ಲಲ್ಲಿ ಪ್ರಾಸಂಗಿಕವಾಗಿ ನುಸುಳಿ ಬರುವ ಕುರುಹುಗಳನ್ನು ಜೋಡಿಸಿ ಕೆಲವು ಸಾಮಾಜಿಕ ಸಂಗತಿಗಳನ್ನು ಊಹಿಸ ಬಹುದು. ಮೊದಲನೆಯದಾಗಿ, ಉಪನಿಷತ್ತಿನ ಸಮಾಜವು ಆಚರಣೆಯ ಯುಗದಿಂದ ಅರಿವಿನ ಯುಗದ ಕಡೆಗೆ ಹೊರಳಿತು ಎನ್ನುವುದು. ಈ ಕುರಿತು ಊಹಿಸಲು ಉಪನಿಷತ್ತುಗಳ ಒಳಗೆ ಪ್ರಮಾಣಗಳು ಸಿಗುತ್ತವೆ. ವೇದಕಾಲದ ದೇವತೆಗಳಾದ ಇಂದ್ರ, ಅಗ್ನಿ, ಮರುತ್, ವರುಣ, ಯಮ, ಅಶ್ವಿನೀಕುಮಾರರು – ಇವರೆಲ್ಲ ಉಪನಿಷತ್ತುಗಳ ಕಾಲಕ್ಕೆ ಬರುವಷ್ಟರಲ್ಲಿ ತಮ್ಮ ಸ್ಥಾನ-ಮಾನಗಳಿಂದ ಸಾಕಷ್ಟು ವಂಚಿತರಾಗಿದ್ದರು. ಕೇನೋಪನಿಷತ್ತು ಈ ದೇವತೆಗಳನ್ನು ಹೀಗಳೆಯುವ ಪ್ರಸಂಗವೊಂದನ್ನು ಮುಂದೆ ಮಾಡಿ ಪರಬ್ರಹ್ಮದ ಬಗ್ಗೆ ಪ್ರಸ್ತಾಪ ಮಾಡುತ್ತದೆ. ಸ್ಥೂಲವಾಗಿ ಈ ಕಾಲವನ್ನು ಏಕದೇವತೋ ಪಾಸನೆಯನ್ನು ಜಾರಿಗೊಳಿಸಿದ ಕಾಲ ಎಂದೂ ಗುರುತಿಸಬಹುದು. ''ತತ್ ತ್ವಮ್ ಅಸಿ'' ಎನ್ನುವುದಾಗಲೀ, ''ಮೊದಲು ಆತ್ಮವೊಂದೇ ಇತ್ತು'' ಎನ್ನುವ ದೃಷ್ಟಿಯಾಗಲೀ, ಏಕದೇವತಾ ಉಪಾಸನೆಯನ್ನೇ ಸೂಚಿಸುತ್ತವೆ. ಆದರೆ ಏಕದೇವತಾ ಸಿದ್ಧಾಂತವು ಉಪನಿಷತ್ತುಗಳ ಸ್ವೋಪಜ್ಞ ಕಲ್ಪನೆಯಲ್ಲ. ಇದರ ಮೊದಲನೆಯ ಉಲ್ಲೇಖ ಋಗ್ವೇದದ ಪುರುಷ ಸೂಕ್ತದಲ್ಲಿ ಸಿಗುತ್ತದೆ. ಋಗ್ವೇದದ I-164-166 ರಲ್ಲಿ ''ಏಕಂ ಸದ್ವಿಪ್ರಾ ಬಹುಧಾ ವದಂತಿ'' – ಸತ್ ಎನ್ನುವುದು ಒಂದೇ, ತಿಳಿದವರು ಅನೇಕ ವಿಧವಾಗಿ ವರ್ಣಿಸುತ್ತಾರೆ –

ಎಂದೂ, ಅಲ್ಲೇ VIII-58 ರಲ್ಲಿ ''ಏಕಂ ವಾ ಇದಂ ಬಿಬಭೂವ ಸರ್ವಮ್'' – ಅಖಂಡವಾಗಿ ಒಂದಾಗಿದ್ದ ಇದೇ ಎಲ್ಲವೂ ಆಯಿತು – ಎಂದೂ, ಏಕದೇವತಾ ಕಲ್ಪನೆಗೆ ಪುಷ್ಟಿಕೊಡುವ ಮಾತುಗಳಿವೆ. ಸ್ತುತಿಯಾಗಿ ಘೋಷಣೆಯಾಗಿ ಮಂತ್ರವಾಗಿ ವೇದಗಳಲ್ಲಿ ಒಪ್ಪಿತವಾಗಿದ್ದ ಈ ತತ್ವವು ಉಪನಿಷತ್ತುಗಳ ಕಾಲದಲ್ಲಿ ದಾರ್ಶನಿಕ ನಿಲುವಿನಿಂದ ಚರ್ಚೆಯ ನಿಕಷಕ್ಕೆ ಒಳಗಾಗಿ ಪುಟಗೊಳ್ಳುತ್ತದೆ. ಪರಿಣಾಮವಾಗಿ, ಈಶಾವಾಸ್ಯದಲ್ಲಿ ''ತೇನ ತ್ಯಕ್ತೇನ ಭುಂಜೀಥಾಃ '' – ಅವನು ನೀಡಿದ್ದನ್ನು ಅನುಭವಿಸು – ಎನ್ನುವ ತೀರ್ಮಾನಗಳು ಸಿಗುತ್ತವೆ.

ಏಕದೇವತಾ ತತ್ತ್ವ ಅಂದರೆ ಪರಬ್ರಹ್ಮದ – ಪರಬ್ರಹ್ಮವೇ ವಿರಾಟ್‌ಪುರುಷ – ಕಲ್ಪನೆಗೆ ಕಾರಣ ಋಷಿಗಳ ಧ್ಯಾನ ಮತ್ತು ಅರಿವು. ಧ್ಯಾನದ ದೆಸೆಯಿಂದ ತಾವು ಅರಿತದ್ದು ಅವರಿಗೆ ಅನುಭವವಾಗಿ ದಕ್ಕಿತು. ವೇದಕಾಲವು ದೇವತೆಗಳಲ್ಲಿ ನಂಬಿಕೆಯಿಟ್ಟು ಆರಾಧಿಸುತ್ತಿತ್ತು. ಅದಕ್ಕಿಂತ ಭಿನ್ನವಾದ ರೀತಿಯಲ್ಲಿ ಉಪನಿಷತ್ತುಗಳು ಧ್ಯಾನಿಸುವ ಮತ್ತು ಅರಿಯುವ ಪ್ರಯೋಗ ನಡೆಸಿದವು. ಐತಿಹಾಸಿಕವಾಗಿ ಇದೊಂದು ನಿಜವೆನ್ನಿಸಿದ ಬದಲಾವಣೆ. ಅಗ್ನಿಯ ಉಪಾಸನೆಯನ್ನು ಜೋರಾಗಿ ಪ್ರತಿಪಾದಿಸುವ ಕಠೋಪನಿಷತ್ತಿನ ಹೊರತಾಗಿ ಉಳಿದ ಕಡೆಯಲ್ಲೆಲ್ಲ ಯಜ್ಞವು ಸಾಂಕೇತಿಕ ರೂಪ ಪಡೆಯಿತು. ಲೌಕಿಕ ಸಂಪತ್ತಿಗೆ ಯಜ್ಞವನ್ನು ಕಾರಣವೆಂದು ವೇದಕಾಲವು ತಿಳಿದ ಕ್ರಮದಲ್ಲಿಯೇ ಉಪನಿಷತ್ತುಗಳ ಕಾಲದಲ್ಲಿ ಕೂಡ ಈ ನಂಬುಗೆ ಮುಂದುವರೆದರೂ ಸಹ ಯಜ್ಞವನ್ನು ಆಚರಿಸಬೇಕಾದ ವಿಧಿ-ವಿಧಾನಗಳ ಬಗ್ಗೆ ವಿಮರ್ಶೆ ನಡೆದಿರಬೇಕು. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಒಂದು ಕಡೆ ವಿಶ್ವವನ್ನು ಯಜ್ಞಾಶ್ವವೆಂದು ಕರೆದು ಈ ಯಜ್ಞಾಶ್ವದ ತಲೆ ಪ್ರಾತಃಕಾಲ, ಸೂರ್ಯ ಕಣ್ಣು, ಗಾಳಿ ಪ್ರಾಣ, ಅಗ್ನಿ ಬಾಯಿ, ಸಂವತ್ಸರ ಆತ್ಮ ಎಂದು ಸಾಂಕೇತಿಕಗೊಳಿಸಲಾಗಿದೆ. ವಿಶ್ವವನ್ನೇ ಅಶ್ವವನ್ನಾಗಿಟ್ಟು ಕೊಂಡು ಯಜ್ಞದ ಉದ್ದೇಶವನ್ನು ಧ್ಯಾನದ ಮೂಲಕ ಈಡೇರಿಸಿಕೊಳ್ಳುವುದು ಇಲ್ಲಿಯ ಮಾನಸಿಕ ಕ್ರಿಯೆ. ಈ ದಿಕ್ಕಿನಲ್ಲಿ, ಓಂಕಾರವು ಉಪನಿಷತ್ಕಾಲದ ಮತ್ತೊಂದು ಮಹತ್ವದ ಸೃಷ್ಟಿ. ಇದರಿಂದ ಧ್ಯಾನದ ಕೇಂದ್ರವು ಖಚಿತ ಗೊಳಿಸಲ್ಪಟ್ಟಿತಷ್ಟೇ ಅಲ್ಲ, ಏಕಾಗ್ರತೆಗೆ ಹೊಸ ಸೂತ್ರವೊಂದು ಸಿಕ್ಕಂತಾಯಿತು. ಆಚರಣೆಯ ಮೌಲ್ಯ ಕುಸಿಯುತ್ತ ಬಂದಂತೆ ಮತ್ತೊಂದು ಕಡೆ ಅರಿವಿನ, ಧ್ಯಾನದ, ಮೌಲ್ಯ ಹೆಚ್ಚಿತು. ಸಾಮವೇದದ ಉದ್ಗೀಥವು ಓಂಕಾರ, ಪ್ರಾಣ, ಚಕ್ಷು ಹಾಗೂ ಸೂರ್ಯ – ಇವುಗಳಿಗೆ ಸಂಕೇತವಾದುದು ಈ ವಾದಕ್ಕೆ

ಮತ್ತೊಂದು ಸಮರ್ಥನೆ. ಛಾಂದೋಗ್ಯದಲ್ಲಿ ಸಾಮವೇ ಓಂಕಾರ, ಮಳೆ, ನೀರು, ಋತು ಮತ್ತು, ಪ್ರಾಣ. ಛಾಂದೋಗ್ಯದ ದೃಷ್ಟಿಯಲ್ಲಿ ಮನುಷ್ಯನ ಬದುಕುವ ಕ್ರಿಯೆಗೆ ಮಿಗಿಲಾದ ಯಜ್ಞವಿಲ್ಲ. ಈ ಯಜ್ಞದಲ್ಲಿ ಹಸಿವು ಬಾಯಾರಿಕೆ ದುಃಖಗಳೇ ದೀಕ್ಷೆ; ನಗು ಭಕ್ಷಣ ಮೊದಲಾದವು ಮಂತ್ರ; ಜಂಗಮವೃತ್ತಿ ದಾನ ಪ್ರಾಮಾಣಿಕತೆ ನಿಗ್ರಹ ಸತ್ಯವಚನಗಳೇ ದಕ್ಷಿಣೆಗಳು. ವಿಶ್ವವೇ ಇಲ್ಲಿ ಆರಾಧಿಸಲು ತಕ್ಕ ದೇವತೆ. ಇವು ಕೇವಲ ಹೋಲಿಕೆಯ ಅಥವಾ ರೂಪಕದ ಉಕ್ತಿಗಳಲ್ಲ. ಧ್ಯಾನ, ಅನುಸಂಧಾನ ಮತ್ತು ಅರಿವಿನ ಫಲವಾಗಿ ಈ ಸಂಕೇತಗಳು ಅವರಿಗೆ ಸಿದ್ಧಿಸಿದವು. ಗುಪ್ತವಾಗಿದ್ದ ಸತ್ಯ ತಟ್ಟನೆ ಪ್ರಕಟವಾಯಿತೆಂಬಂತೆ ಐತರೇಯವು ಈ ದೇಹವನ್ನು ದೇವರುಳ್ಳ ದೇಗುಲವನ್ನಾಗಿ ಮಾಡಿ ಧ್ಯಾನಕ್ಕೆ ಹೊಸ ಅರ್ಥವನ್ನು ತಂದುಕೊಟ್ಟಿತು.

ಉಪನಿಷತ್ತುಗಳು ತಮ್ಮ ಸಮಕಾಲೀನ ಸಮಾಜದ ಬಗ್ಗೆ ಬಾಯಿ ಮುಚ್ಚಿಕೊಂಡಿರಲು ಕಾರಣ ಬಹುಶಃ ಅವುಗಳ ಸ್ವಭಾವಕ್ಕೆ ಈ ವ್ಯವಸ್ಥೆಯ ಬಗ್ಗೆ ನುಡಿಯುವುದು ಕೃತ್ರಿಮವಾಗುತ್ತಿತ್ತು. ಆದರೆ ವಿಪರೀತವಾದ ವ್ಯಕ್ತಿವಾದವು ಆ ಕಾಲದಲ್ಲಿ ಬೆಳೆಯುತ್ತಿರುವುದಕ್ಕೂ ಚಿಂತನೆಯ ಸ್ವಾತಂತ್ರ್ಯದೊಡನೆ ಸಾಮಾಜಿಕ ಸ್ಥಿತ್ಯಂತರಗಳು ತಾನಾಗಿ ಜರುಗುವುದಕ್ಕೂ ಪರಸ್ಪರ ಸಂಬಂಧವಿರಬಹುದು. ಹಾಗೊಂದು ಪ್ರಭಾವಿತವಾದ ಸಮಾಜದ ಹೆಜ್ಜೆ ಗುರುತುಗಳು ಉಪನಿಷತ್ತುಗಳಲ್ಲಿ ಗೋಚರಿಸುತ್ತವೆ. ಉಪನಿಷತ್ತುಗಳಲ್ಲಿ ಕಡಿಮೆಯಾಗುತ್ತ ಬಂದ ಪುರೋಹಿತಶಾಹಿಯ ಪ್ರಭಾವ ಮತ್ತು, ಮೇಲುಗೈ ಸಾಧಿಸಿದಂತೆ ಕಾಣುವ ಕ್ಷತ್ರಿಯರು – ಈ ಮೊದಲಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸದರಿ ಅಭಿಪ್ರಾಯಕ್ಕೆ ಬರಬೇಕಾಗಿದೆ. ಪುರೋಹಿತಶಾಯಿಯ ಅತಿಗೆಳೆಸಿದ ಚಟುವಟಿಕೆಗಳನ್ನು ಛಿದ್ರಗೊಳಿಸಲು ಉಪನಿಷತ್ತು ಹೊಸ ನಿಲುವು ತೆಗೆದು ಕೊಂಡಿತು ಎನ್ನುವ ವಾದವೂ ಇದೆ. ಕ್ಷತ್ರಿಯರು ಈ ವಿಚಾರಕ್ರಾಂತಿಯನ್ನು ನಡೆಸಲು ಅವರಿಗೆ ಸಹಜವಾಗಿ ಸಿಕ್ಕಿದ ಪುರೋಹಿತವರ್ಗದ ಒಡನಾಟ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ದೊರಕಿದ ಸಿಂಹಪಾಲು ಸಾಕಷ್ಟು ಪ್ರಚೋದನೆ ನೀಡಿರ ಬೇಕು. ಬ್ರಾಹ್ಮಣೇತರರಿಗೆ ವಿಶೇಷವಾಗಿ ಕ್ಷತ್ರಿಯರಿಗೆ ಪುರೋಹಿತ ಶಾಹಿಯನ್ನು ಎದುರಿಸುವುದು ಅಂದಿನ ದೊಡ್ಡ ಸವಾಲಾಗಿತ್ತೆಂದು ತೋರುತ್ತದೆ.

ಈ ಮೊದಲಾದ ಅಭಿಪ್ರಾಯಗಳಿಗೆ ಬೆಂಬಲವಾಗಿ ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಬರುವ ಪ್ರಸಂಗಗಳನ್ನು ತೋರಿಸಬಹುದು. ಕೇನೋಪನಿಷತ್ತಿನಲ್ಲಿ ಟೀಕೆಗೆ ಒಳಗಾಗುವ ವೈದಿಕ ದೇವತೆಗಳು, ಕಠದಲ್ಲಿ ಯಮನಿಂದ ಅಗ್ನಿಯ ಉಪಾಸನೆಯ ಉಪದೇಶವನ್ನು ಪಡೆಯುವ ಬ್ರಾಹ್ಮಣ, ಈ ಭೂಮಿ ನಮ್ಮ

ಭೋಗಕ್ಕಾಗಿ ಎನ್ನುವ ಐತರೇಯದ ಕ್ಷತ್ರಿಯ ಲಹರಿ, ವರ್ಣಾಶ್ರಮಧರ್ಮದ ಅನೇಕತ್ವದ ಸಿದ್ಧಾಂತಕ್ಕೆ ಪ್ರತಿಪಕ್ಷವಾಗಿ ನಿಲ್ಲುವ ಇಡೀ ಛಾಂದೋಗ್ಯದ ಅಭೇದ ದೃಷ್ಟಿ – ಹೀಗೆ ಇಂತಹ ಉದಾಹರಣೆಗಳಿಗೆ ಲೆಕ್ಕವಿಲ್ಲ. ಛಾಂದೋಗ್ಯದಲ್ಲಿ ಅಶ್ವಪತಿರಾಜನು ಪ್ರಾಚೀನ ಶಾಲ ಹಾಗೂ ಅವನ ಗೆಳೆಯರಿಗೆ ಅದ್ವೈತದ ರಹಸ್ಯವನ್ನು ಬೋಧಿಸುವುದು ನಿಸ್ಸಂಶಯವಾಗಿ ತೋರುವುದು ಪಲ್ಲಟ ಗೊಳ್ಳುತ್ತಿರುವ ಸಾಮಾಜಿಕ ವ್ಯವಸ್ಥೆಯನ್ನೇ.

ಉಪನಿಷತ್ತುಗಳು ಸೂಚಿಸುವ ಸ್ಥಿತ್ಯಂತರ ಕ್ಷತ್ರಿಯರ ಮತ್ತು ಬ್ರಾಹ್ಮಣರ ನಡುವಿನ ವೈಪೋಟಿಗಷ್ಟೇ ಸೀಮಿತವಾಗಿದ್ದಿರಲಿಕ್ಕಿಲ್ಲ. ಏಕೆಂದರೆ, ಉದಾರಿ, ದೈವಭಕ್ತ, ಶ್ರೇಷ್ಠ ವ್ಯಕ್ತಿ ಎನ್ನಿಸಿಕೊಂಡಿದ್ದ ಜಾನುಶ್ರುತಿರಾಜನಿಗೆ ಗಾಡಿಯ ಕೆಳಗೆ ಕಜ್ಜಿಯನ್ನು ತುರಿಸುತ್ತ ಕುಳಿತ ರೈಕ್ವನು ಅದ್ವೈತದ ಪರಮ ರಹಸ್ಯವನ್ನೂ ಬೋಧಿಸುತ್ತಾನೆ. ಬೋಧಿಸುವ ಮೊದಲು, ಸಂಪತ್ತು, ಹಸುಗಳು, ಹೇಸರಗತ್ತೆಗಳನ್ನು ಹೂಡಿದ ರಥ, ಮತ್ತು ಅಮೂಲ್ಯವಾದ ಕಂಠಹಾರದೊಡನೆ ಬಂದು ತನ್ನ ಮಗಳನ್ನೂ ಒಪ್ಪಿಸುವೆನೆಂದು ಪ್ರಲೋಭನೆಯೊಡ್ಡುತ್ತ ನಿಂತ ರಾಜನಿಗೆ ರೈಕ್ವನು ''ಛಿ, ಶೂದ್ರ'' ಎಂದು ಕೂಗಾಡಿ ನಿಂದಿಸುತ್ತಾನೆ. ಶೂದ್ರ ಪ್ರವಾಹಣನು ಬ್ರಾಹ್ಮಣರಿಗೆ ಓಂಕಾರ ಸ್ವರೂಪವನ್ನು ವಿವರಿಸುವ ಘಟನೆಯೂ ಉಪನಿಷತ್ತಿನಲ್ಲಿದೆ. ತನ್ನ ಗೋತ್ರವೇ ಗೊತ್ತಿಲ್ಲದ, ತನ್ನ ಮಗನ ತಂದೆ ಯಾರೆಂದು ಕೂಡ ತಿಳಿದಿರದ, ದುಡಿಯುವ ವರ್ಗದ ಜಬಾಲಾ ಎಂಬ ಮಹಿಳೆಯ ಮಗ ಸತ್ಯಕಾಮನಿಗೆ ಆತನ ಸತ್ಯವಚನವೇ ಆಸರೆಯಾಗುವ ಪ್ರಸಂಗವು ಪುರೋಹಿತಶಾಹಿಯ ಗೋತ್ರಜ್ಞಾನದ ಅನಿವಾರ್ಯತೆಯನ್ನು ಸುಳ್ಳಾಗಿಸುತ್ತದೆ ಮತ್ತು ವಿದ್ಯಾರ್ಜನೆಯ ಕಟ್ಟುಪಾಡನ್ನು ಸಡಿಲಿಸುತ್ತದೆ. ಇಂತಹ ಸಾಮಾಜಿಕ ಬದಲಾವಣೆಗೆ ಕಾರಣವನ್ನು ಉಪನಿಷತ್ತುಗಳ ವ್ಯಕ್ತಿವಾದದಲ್ಲಿಯೇ ಹುಡುಕಬೇಕು. ಮುಂದೆ, ಧರ್ಮಶಾಸ್ತ್ರಗಳ ಕಾಲದಲ್ಲಿ ಮತ್ತೆ ಏರುಪೇರಾಗಿ. ಪ್ರತ್ಯೇಕತೆಯನ್ನು ಉಳಿಸಿಕೊಂಡ ಪ್ರತಿಯೊಂದು ವರ್ಣವೂ ವ್ಯವಸ್ಥೆಯ ರಕ್ಷಣೆಗೆ ನಿಲ್ಲುತ್ತದೆ. ಆದರೆ ಈ ಎಲ್ಲದರ ನಡುವೆ ಸಂಭವಿಸಿದ ಉಪನಿಷತ್ತು ಬಹುದೊಡ್ಡ ವಾಸ್ತವ.

*   *   *

ಈ ಲೇಖನಗಳನ್ನು ಪುಸ್ತಕ ರೂಪದಲ್ಲಿ ತಂದು ಪ್ರಾಜ್ಞರಾದ ಓದುಗರ ಕೈಯಲ್ಲಿಡಬೇಕೆಂದು ಬಯಸಿ ಪ್ರಕಾಶಕರಿಲ್ಲದೆ ಪರದಾಡುತ್ತಿದ್ದ ನನಗೆ ಅಕಸ್ಮಾತ್ತಾಗಿ ನೆರವಿಗೆ ಬಂದವರು ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್

ಲಿಮಿಟೆಡ್‌ನ ವ್ಯವಸ್ಥಾಪಕ ಸಂಪಾದಕರಾದ ಶ್ರೀ ಆರ್. ಎಸ್. ರಾಜಾರಾಮ್ ಮತ್ತು ಅದರ ಸಂಪಾದಕ ಮಂಡಳಿಯ ಸದಸ್ಯರು. ಇಷ್ಟೇ ಅಲ್ಲದೆ, ಇದಕ್ಕೆ ಒಂದು ಸೂಕ್ತವಾದ ಮುನ್ನುಡಿಯನ್ನು ಕೂಡ ಪ್ರಾಧ್ಯಾಪಕ ಬಿ. ವಿ. ವೀರಭದ್ರಪ್ಪ ಅವರಿಂದ ಬರೆಸಲು ಅವರು ನೆರವಾಗಿದ್ದಾರೆ. ಶ್ರೀ ಬಿ. ವಿ. ವೀರಭದ್ರಪ್ಪ ಅವರಿಗೆ ಮತ್ತು ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಈ ಬಗ್ಗೆ ಋಣಿಯಾಗಿರಲು ನನಗೆ ಸಂತೋಷವೆನಿಸುತ್ತಿದೆ.

ಈ ಲೇಖನಗಳಿಗೆ ಆಧಾರವಾಗಿ ನಾನು ಶ್ರೀ ನಾರಾಯಣ ರಾಮ ಆಚಾರ್ಯರು ಸಂಪಾದಿಸಿದ ''ಅಷ್ಟಾವಿಂಶತಿ ಉಪನಿಷದಃ'' ಎನ್ನುವ ಉಪನಿಷತ್ತುಗಳ ಮೂಲಪಾಠವುಳ್ಳ ಸಂಗ್ರಹವನ್ನು ಬಳಸಿಕೊಂಡಿದ್ದೇನೆ. ''ಕಠೋಪನಿಷತ್ತಿನ ಹೊಸಭೂಮಿಕೆ'' ಮತ್ತು ''ಛಾಂದೋಗ್ಯದ ಉಪಾಖ್ಯಾನಗಳು'' ಈ ಎರಡನ್ನೂ ಬಿಟ್ಟು ಉಳಿದ ಐದೂ ಲೇಖನಗಳು 'ಶೂದ್ರ' ಕನ್ನಡ ತಿಂಗಳ ಪತ್ರಿಕೆಯಲ್ಲಿ ಪ್ರಕಟವಾಗಿವೆ. ''ಈಶಾವಾಸ್ಯ ಉಪನಿಷತ್ತು: ಒಂದು ಹೊಸ ಟಿಪ್ಪಣಿ'' ಲೇಖನವನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿಯು ತನ್ನ 1988ರ 'ಆಯ್ದ ವಿಮರ್ಶೆಗಳು' ಗ್ರಂಥದಲ್ಲಿ ಪ್ರಕಟಿಸಿದೆ. ಈ ಬಗ್ಗೆ 'ಶೂದ್ರ' ಕ್ಕೂ ಅಕಾಡೆಮಿಗೂ ನಾನು ಆಭಾರಿ.

**ಆರ್. ಡಿ. ಹೆಗಡೆ, ಆಲ್ಮನೆ**

# ಪರಿವಿಡಿ

# ಈಶಾವಾಸ್ಯ ಉಪನಿಷತ್ತು – ಒಂದು ಹೊಸ ಟಿಪ್ಪಣಿ

ಶಾಂತಿಪಾಠದ ಒಂದು ಮಂತ್ರ ಹಾಗೂ ಹದಿನೆಂಟು ಶ್ಲೋಕಗಳಿರುವ ಈಶಾವಾಸ್ಯ ಉಪನಿಷತ್ತು ಉಪನಿಷತ್ತುಗಳಲ್ಲೆಲ್ಲ ಅತಿ ಚಿಕ್ಕದು ಮತ್ತು ಪರಂಪರೆಯ ಪ್ರಕಾರ ಬಹಳ ಪ್ರಾಚೀನವಾದುದು. ಇದು ಶುಕ್ಲ ಯಜುಸ್ಸಂಹಿತೆಯ (ವಾಜಸನೇಯಿ ಸಂಹಿತೆ) ನಲವತ್ತನೆಯ ಅಧ್ಯಾಯ. ಇದಕ್ಕೂ ಮೊದಲಿನ ಮೂವತ್ತೊಂಬತ್ತು ಅಧ್ಯಾಯಗಳಲ್ಲಿ ವೈದಿಕ ಕರ್ಮಕಲಾಪಗಳ ನಿರೂಪಣೆಯಿದೆ. ಹಿಂದೂ ಪರಂಪರೆಯಲ್ಲಿ ವೇದಾಂತ ಎಂದು ಪ್ರಸಿದ್ಧವಾದ ಜ್ಞಾನಕಾಂಡವು ಶುರುವಾಗುವುದು ಈಶಾವಾಸ್ಯದಿಂದ. ಆದರೆ ಈ ಉಪನಿಷತ್ತಿನ ಆಕೃತಿ (Form), ಧಾವಂತ (Tension) ಹಾಗೂ ತಾತ್ವಿಕ ನೆಲೆಗಳು ಇದನ್ನು ಭವದ ಬದುಕಿಗೆ ಆಪ್ತವಾಗಿ ಮುಖಮಾಡಿ ನಿಂತು ಆಧ್ಯಾತ್ಮಿಕ ಸ್ಫೂರ್ತಿಯ ಅಂತರ್ ವ್ಯಾಪಾರದಿಂದ ಗೊಂದಲಕ್ಕೀಡಾದ ಋಷಿಯೊಬ್ಬನ ಭಾವಗೀತಾತ್ಮಕ ಸ್ವಗತವನ್ನಾಗಿಸುತ್ತದೆ. ಇಲ್ಲಿಯ ಕಲಾತ್ಮಕತೆ ಮತ್ತು ತಾತ್ವಿಕತೆಗಳ ದಟ್ಟ ಹೊಂದಾಣಿಕೆಯ ಒತ್ತಾಯ ಕೂಡ ಅಧ್ಯಾತ್ಮರೂಪದ ಅದ್ವೈತವನ್ನು ನಿರಾಕರಿಸುತ್ತ 'ಸತ್ಯ'ದ ಮತ್ತು 'ಆಭಾಸ'ದ (Reality and Appearance) ನಂಟಿನ ಹುಡುಕಾಟವೇ ಆಗಿದೆ.

ಆದರೆ, ಉಪನಿಷತ್ತುಗಳ ಸಾಂಪ್ರದಾಯಿಕ ಓದುಗರು ಈಶಾವಾಸ್ಯದಲ್ಲಿ ಇಂತಹ ಒಂದು ಹುಡುಕಾಟವಿದೆ ಎನ್ನುವುದನ್ನು ಒಪ್ಪುವುದಿಲ್ಲ. ಶ್ರದ್ಧಾವಂತನಾದ ಹಿಂದುವಿಗೆ ಈಶಾವಾಸ್ಯದಲ್ಲಿ ತೋರುವುದು ದಾರ್ಶನಿಕ ಚಿಂತನೆಯೊಂದೇ. ಇದಕ್ಕೆ ಬೆಂಬಲ ಎನ್ನುವ ರೀತಿಯಲ್ಲಿ, ಆಚಾರ್ಯ ಶಂಕರರು ವ್ಯಾಖ್ಯಾನ ಮಾಡುತ್ತ ಈಶಾವಾಸ್ಯದಲ್ಲಿ ಅದ್ವೈತ ದರ್ಶನವಿದೆ ಎಂದು ಸಾರುತ್ತಾರೆ. ವೇದಾಂತಿಗಳಿಗೆ 'ಅವಿದ್ಯೆ' ಎಂದು ತೋರುವ ಅಗ್ನಿಹೋತ್ರ ಮೊದಲಾದ ವೈದಿಕ ಆಚರಣೆಗಳು ಹಾಗೂ 'ವಿದ್ಯೆ' ಎಂದು ಗೋಚರಿಸುವ ಬ್ರಹ್ಮಜ್ಞಾನ – ಇವೆರಡೂ ಪರಸ್ಪರ ವಿರೋಧಿಗಳೂ ಅಲ್ಲ, ಭಿನ್ನವೂ ಅಲ್ಲ; 'ಅವಿದ್ಯೆ'ಯಿಂದ ಮೃತ್ಯುವನ್ನು ದಾಟಿದ ಮನುಷ್ಯನು 'ವಿದ್ಯೆ'ಯಿಂದ 'ಶಾಶ್ವತ'ವಾದುದನ್ನು ಪಡೆಯುತ್ತಾನೆ ಎಂದು ಪ್ರತಿಪಾದಿಸುವ ಆಚಾರ್ಯ ಶಂಕರರು ಹೀಗೆ ಯೋಚಿಸಲು ''ಜಗತ್ತಿನಲ್ಲಿ ಇರುವ ಎಲ್ಲವೂ

ಈಶ್ವರನಿಂದ ಆವರಿಸಲ್ಪಟ್ಟಿದೆ'' *(ಈಶಾವಾಸ್ಯ-1)* ಎಂಬ ದೃಷ್ಟಿಯನ್ನು ಅವಲಂಬಿಸುತ್ತಾರೆ. ಹೀಗಾಗಿ ಅದ್ವೈತದ ದೃಷ್ಟಿಯಲ್ಲಿ 'ಅವಿದ್ಯೆ' ಹಾಗೂ 'ವಿದ್ಯೆ'ಗಳು ವಿರೋಧಿಗಳಲ್ಲ; ಈ ಎರಡನ್ನೂ ಅವುಗಳ ವೈಶಿಷ್ಟದೊಡನೆ ಅರಿತವನು ಮೃತ್ಯುವನ್ನು ದಾಟಿ ಶಾಶ್ವತವಾದ ಸತ್ಯದ ದರ್ಶನ ಪಡೆಯುತ್ತಾನೆ. ಈಶಾವಾಸ್ಯದ 'ವಿದ್ಯಾ', 'ಅವಿದ್ಯಾ', 'ಕರ್ಮ', 'ಸಂಭೂತಿ' ಮತ್ತು 'ಅಸಂಭೂತಿ' ಮೊದಲಾದ ಎಲ್ಲ ಮುಖ್ಯ ಕಲ್ಪನೆಗಳನ್ನು ತಮ್ಮ ಆಧ್ಯಾತ್ಮಿಕ ತೆಕ್ಕೆಯಲ್ಲಿ ಬಳಸಿಕೊಳ್ಳುವ ಆಚಾರ್ಯ ಶಂಕರರು ಭಾಷ್ಯದ ಕೊನೆಯಲ್ಲಿ ತಮ್ಮ ವ್ಯಾಖ್ಯಾನವೇ ಈ ಉಪನಿಷತ್ತಿನ ಮಂತ್ರಗಳ ನಿಜವಾದ ಆಶಯ ಎಂದು ಹಠದಿಂದ ಹೇಳಿಕೊಂಡಿದ್ದಾರೆ. ಜೊತೆಗೆ, ಈಶಾವಾಸ್ಯದ ತಾತ್ವಿಕ ನೆಲೆಯನ್ನು ಇನ್ನೂ ಹಲವು ದೃಷ್ಟಿಯಿಂದ ಅರಿಯುವ ಯತ್ನ ಆಚಾರ್ಯ ಶಂಕರರಿಗಿಂತ ಮೊದಲು ನಡೆದಿರಬಹುದು ಎಂದು ಅವರ ಈ ಮಾತಿನಿಂದ ಗ್ರಹಿಸಲು ಸಾಧ್ಯ.

ಸದ್ಯದ ಟಿಪ್ಪಣಿಯಲ್ಲಿ, ಈಶಾವಾಸ್ಯದ ವ್ಯಾಖ್ಯಾನಗಳನ್ನು ಪರೀಕ್ಷೆಗೆ ಒಳಪಡಿಸುವುದು ನನ್ನ ಉದ್ದೇಶವಲ್ಲ. ಈಗಾಗಲೇ ಪ್ರಸ್ತಾಪಿಸಿದಂತೆ, ಇದರ ಮೂಲದಲ್ಲಿ ಶುಕ್ಲಯಜುಸ್ಸಂಹಿತೆಯ ಕರ್ಮಭಾಗವಿದೆ. ಈ ಕರ್ಮಭಾಗದ ನಿರೂಪಣೆಯ ನಂತರ ಒಂದು ಹೊಸ ಪರಂಪರೆ ಆರಂಭವಾಗುತ್ತದೆ. ಇದೇ ಈಶಾವಾಸ್ಯದ ಆರಂಭ. ವೈದಿಕ ಆಚರಣೆ ಹಾಗೂ ಉಪನಿಷತ್ತುಗಳ ಜ್ಞಾನೋಪಾಸನೆ – ಈ ಎರಡೂ ವಿರುದ್ಧ ದಿಕ್ಕಿನಲ್ಲಿ ಧಾವಿಸುತ್ತಿರುವಾಗ ಆರಂಭದ ಹೆಜ್ಜೆಗುರುತಿನಂತಿರುವ ಈಶಾವಾಸ್ಯದ ಕಾಣ್ಕೆಯನ್ನು ಗಮನಿಸುವುದು ಇಲ್ಲಿ ನನ್ನ ಯತ್ನ.

ಹೀಗೆ, ಆಚರಣೆಯ ವಲಯದಿಂದ ಅರಿವಿನ ಯತ್ನದತ್ತ ಚಲಿಸುವ ಈಶಾವಾಸ್ಯವು ಸಂತೆಯಲ್ಲಿ ನಿಂತೂ ಏಕಾಂಗಿಯಾದವನ ಸ್ವಗತವಾಗುತ್ತದೆ. ಬದುಕು ಬದುಕುವುದಕ್ಕಾಗಿ ಅಲ್ಲ ಎನ್ನುವಷ್ಟು ಜಡಕ್ರಿಯಾ ಕಲಾಪವಾದ ವೈದಿಕ ಕರ್ಮಾಚರಣೆಯು ರಿಚುಅಲೈಸ್ಡ್ ಆಗಿ ಬೇರುಬಿಟ್ಟಾಗ ಅದರ ಯಾಂತ್ರಿಕತೆಯ ಹದ್ದುಬಸ್ತಿನಲ್ಲಿದ್ದ ಋಷಿಯೊಬ್ಬ ಒಂದು ಘೋಷಣೆಯ ಕೂಗನ್ನು ಹಾಕಿ ತನ್ನ ನಂಬುಗೆಯನ್ನು ಏರುದನಿಯಲ್ಲಿ ಹೇಳುತ್ತಲೆ ಅಂತರ್ಮುಖಿಯಾಗಿ 'ಸ್ವಗತ' ಕ್ರಮದಲ್ಲಿ ಆಡಿಕೊಳ್ಳುವ – ತೋಡಿಕೊಳ್ಳುವ ಭಾವನೆಗಳು ಈಶಾವಾಸ್ಯದಲ್ಲಿ ದಾಖಲಾಗಿವೆ. ಭಾವನೆಯ ಆಳದಲ್ಲಿ ತಾತ್ವಿಕತೆಯ ಹುಡುಕಾಟವೇ ಇಲ್ಲಿಯ ಮುಖ್ಯ ಕಸುಬಾಗುತ್ತದೆ. ಹೀಗೆ ಈ ಪ್ರಪಂಚವನ್ನು ತೊರೆಯಲಾಗದ, ತೊರೆಯಲೊಪ್ಪದ ಋಷಿ

ಮನವನ್ನು ಬಗೆಯುವ ಪದ್ಯ ಇದು.

ಈಶಾವಾಸ್ಯವು ಒಂದು ಬೌದ್ಧಿಕಯುಗದ ಆರಂಭವನ್ನು ಸೂಚಿಸುತ್ತದೆ. ಈ ಯುಗದಲ್ಲಿ ಚಿಂತನೆಯೇ ಉಪಾಸನೆ, ಚಿಂತನೆಯೇ ಆಚರಣೆ. ಈ ಚಿಂತನೆ ಆಧ್ಯಾತ್ಮಿಕ ಸ್ವರೂಪವನ್ನು ಪಡೆದುಕೊಂಡಿದ್ದರೂ ಅತಿಲೋಲುಪತೆಯ ನೆರಳನ್ನು ಕಟ್ಟಿಕೊಂಡೇ ಬೆಳೆಯುತ್ತದೆ.

ಘೋಷಣೆಯಿಂದ ಸ್ವಗತಕ್ಕೆ ಇಳಿದು ತಾತ್ವಿಕವಾಗಿ ಗಟ್ಟಿಗೊಳ್ಳುವ ಈಶಾವಾಸ್ಯದಲ್ಲಿ ಗೊಂದಲದಿಂದ ಸ್ಪಷ್ಟತೆಗೆ ತಲುಪುವ ಮತ್ತೊಂದು ಸಮಾಂತರ ಕ್ರಿಯೆಯೂ ಇದೆ. ಇವೆರಡೂ ಐಕ್ಯವಾಗುವುದು ಇದರ ಕಲಾತ್ಮಕ ಪದ್ಯಗಳಲ್ಲಿ.

ಮೇಲ್ನೋಟಕ್ಕೆ ಈಶಾವಾಸ್ಯದ ವಸ್ತುವಿವರಗಳಲ್ಲಿ ಏಕಸೂತ್ರವನ್ನು ಕಾಣಲಾಗುವುದಿಲ್ಲ. ಆಚಾರ್ಯ ಶಂಕರರು ತಮ್ಮ ಭಾಷ್ಯದಲ್ಲಿ ನಡೆಸಿರುವ ದೂರಾನ್ವಯವೂ ಇದನ್ನೇ ಗುರುತಿಸುತ್ತದೆ. ಆದರೂ ಇಲ್ಲಿಯ ಮಂತ್ರಗಳ ಭಾವಾವೇಶವು ವಸ್ತುವನ್ನು ನಿರ್ವಹಿಸುವ ರೀತಿ ಅನನ್ಯವಾಗಿದೆ. ಋಷಿಯ ನಂಬುಗೆಗಳನ್ನು ಘೋಷಿಸುವ ಮೊದಲ ಭಾಗವು (ಶಾಂತಿ ಮಂತ್ರದಿಂದ ಎಂಟನೆಯ ಮಂತ್ರದವರೆಗೆ) ಸ್ವಾರ್ಥದ ಜಡಕ್ರಿಯೆಯಾಗಿ ಬದಲಾದ ವೈದಿಕ ಸಮಾಜದ ಡಿಕಡೆಂಟ್ ಪ್ರೇರಣೆಯ ಬಗ್ಗೆ ಜಾಗೃತವಾಗುವ ಮೂಲಕ ಆರಂಭವಾಗುತ್ತದೆ. ಋಷಿಯ ವಿಷಾದವೇ ಈ ವಸ್ತುವಿನ ನಿರ್ವಹಣೆ ಮಾಡುವುದರಿಂದ ಶಾಂತಿ ಮಂತ್ರದಲ್ಲಿ ಸಾಂಪ್ರದಾಯಿಕ ಅದ್ವೈತದ ನಿಲುವಿಗಿಂತ ಭಿನ್ನವಾದ 'ಸತ್ಯ'ದ ಹಾಗೂ 'ಆಭಾಸ'ದ ಸುರಳಿಯ ಪ್ರಸ್ತಾಪವಾಗುತ್ತದೆ. ಏಕೆಂದರೆ ಋಷಿಗೆ ವಿಷಾದ ಕೊನೆಗೊಳ್ಳುವುದು ಮುಖ್ಯವಾಗುತ್ತದೆ. ಈ ವಿಷಾದ ಆವನ ಗೊಂದಲ ಅಂದರೆ ಅರಿವಿನಲ್ಲಿಯ ಅಸ್ಪಷ್ಟತೆ ಕೂಡ ಹೌದು.

ಸತ್ಯ ಹಾಗೂ ಸತ್ಯದ ತೋರಿಕೆ ಎರಡೂ ಪರಿಪೂರ್ಣವೇ. ತೋರಿಕೆಯ ದೃಶ್ಯಪ್ರಪಂಚ ಹುಟ್ಟುವುದು ಸೂಕ್ಷ್ಮವಾದ ಸತ್ಯದಿಂದಲೇ. ಹೀಗಾಗಿ ದೃಶ್ಯಪ್ರಪಂಚವು (ಇದನ್ನು 'ಕಾರ್ಯಬ್ರಹ್ಮ' ಎಂದೂ ಕರೆಯುತ್ತಾರೆ) ಅಳಿಸಿ ಹೋದರೂ ಸತ್ಯದ ಪರಿಪೂರ್ಣತೆ ಮುಕ್ಕಾಗುವುದಿಲ್ಲ – ಎನ್ನುವ ವಿಶ್ವಾಸವನ್ನು ಪ್ರಕಟಿಸುವ ಈಶಾವಾಸ್ಯದ ಋಷಿಗೆ, ಮರುಕ್ಷಣದಲ್ಲಿ, ತಾನು ಬದುಕಬೇಕಾದ ಈ ಪ್ರಪಂಚ ಮುಖ್ಯವೆನ್ನಿಸುತ್ತದೆ. ಇಡೀ ಜಗತ್ತನ್ನು ಮುಚ್ಚಿರುವ ಸತ್ಯ ಒಂದೇ. ಆದುದರಿಂದ ಬದುಕುವ ಭೋಗದಲ್ಲಿಯೂ ಸಹ ತ್ಯಾಗದ – ಯಾವುದೂ ವಾಸ್ತವವಾಗಿ ತನ್ನದಲ್ಲ – ಎನ್ನುವ ಧರ್ಮ ಸೂಕ್ಷ್ಮವನ್ನು ಅಳವಡಿಸಿಕೊಳ್ಳುವ

ಅಗತ್ಯ ಋಷಿಗೆ ತೋರುತ್ತದೆ. ''ಮಾಗೃಧಃ ಕಸ್ಯಸ್ವಿದ್ಧನಂ'' *(ಈಶಾವಾಸ್ಯ)* – ''ಯಾರೊಬ್ಬರ ಸೊತ್ತಿಗೂ ಆಸೆಪಡಬೇಡ'' – ಎಂದು ನೋವಿನಿಂದ ಅವನು ಹೇಳುವ ಮಾತು ಸ್ವಾರ್ಥದಲ್ಲಿ ರಮಿಸುತ್ತಿರುವ ತನ್ನ ಸಮಾಜಕ್ಕೆ ಕನ್ನಡಿಯಾಗುತ್ತದೆ.

ಆದರೂ ಋಷಿಯ ದೃಷ್ಟಿಯಲ್ಲಿ ಈ ಪ್ರಪಂಚ – ಈ ಕರ್ಮಭೂಮಿ – ಗೌಣವಲ್ಲ. ''ಕುರ್ವನ್ನೇವೇಹ ಕರ್ಮಾಣಿ ಜಿಜೀವಿಶೇತ್ ಶತಂ ಸಮಾಃ'' *(ಈಶಾವಾಸ್ಯ-2)* – ''ದುಡಿಯುತ್ತಲೇ ಈ ಭೂಮಿಯಲ್ಲಿ ನೂರು ವರ್ಷಗಳ ವರೆಗೆ ಬದುಕಲು ಬಯಸಬೇಕು.'' ಏಕೆಂದರೆ, ದುಡಿಮೆ ಬದುಕಿನ ಗುರುತು. ಬದುಕನ್ನು ನಡೆಸುವ ಬೇರೆ ಯಾವ ಉಪಾಯವೂ ಪ್ರಪಂಚದಲ್ಲಿ ಇಲ್ಲದ ಕಾರಣ ಒಟ್ಟು ಕ್ರಿಯಾಶೀಲತೆಯ ಆದರ್ಶದಲ್ಲಿ ಬರುವ ಯಾವ ದುಡಿಮೆಯೂ ಹೀನವಲ್ಲ. ಈ ಅರಿವಿಲ್ಲದ ಮನುಷ್ಯ ತನ್ನನ್ನು ತಾನೇ ಕೊಂದುಕೊಳ್ಳುತ್ತಾನೆ. ಹೀಗೆ ಬದುಕಲು ತಿಳಿಯದ ಮನುಷ್ಯರೆಲ್ಲ ಅಂಧಕಾರ ವನ್ನು ಸೇರುತ್ತಾರೆ. ಅಲ್ಲಿದ್ದು ಆಮೇಲೆ ಸೇರುವುದೂ ಅಲ್ಲಿಗೇ. ಅವರ ಇರವೂ ಅಷ್ಟೆ. ಸಾವೂ ಅಷ್ಟೆ. ಈ ಅಂಧಕಾರವು ಋಷಿಯನ್ನು ಅಲುಗಾಡಿಸುವ ಭೌಮಪ್ರತಿಮೆ. ಋಷಿಗೆ ಅಂಧಕಾರದಿಂದ ಇನ್ನೂ ಬಿಡಿಸಿಕೊಂಡಿರದ ಸತ್ಯದ ರೂಪವನ್ನು ಅರಿಯಬೇಕಾದುದು ಅನಿವಾರ್ಯವಾಗುತ್ತದೆ. ಅದನ್ನು ಕಾಣಲೇಬೇಕು, ಆ ಅರಿವಿಲ್ಲದೆ ಬದುಕು ಸುಂದರವಲ್ಲ, ಅದನ್ನು ಬಿಟ್ಟು ಬದುಕೆಂಬುದಿಲ್ಲ ಎಂದು ಋಷಿ ಹಂಬಲಿಸುತ್ತಾನೆ.

ಈಶಾವಾಸ್ಯದಲ್ಲಿ ಋಷಿಯ ಈ ಹುಡುಕಾಟ, ಅದರ ವಿವರಗಳು, ಅದರ ಫಲ, ಸರಳವಾಗಿ ನೇರವಾಗಿ ದಾಖಲಾಗುತ್ತವೆ. ಈ ಪ್ರಪಂಚದ 'ಸತ್ಯ'ಕ್ಕೆ ಪರಿವರ್ತನೆಯಿಲ್ಲದಿದ್ದರೂ ಋಷಿಯ ದೃಷ್ಟಿಯಲ್ಲಿ ಅದಿನ್ನೂ ಅರಿವಿಗೆ ಬರಬೇಕಾದ ನಿಗೂಢ ವಿಷಯ. ತನ್ನೆಡೆಗೆ ಧಾವಿಸುವವನಿಂದ ಓಡೋಡಿ ತಪ್ಪಿಸಿಕೊಳ್ಳದೆ ಒಂದೆಡೆ ನಿಂತುಬಿಟ್ಟು ತಪ್ಪಿಸಿಕೊಳ್ಳುವುದು 'ಸತ್ಯ'ದ ಸ್ವಭಾವ. ಇದನ್ನು ಅರಿಯುವ ಸಲುವಾಗಿ ಋಷಿ ಮೊಟ್ಟಮೊದಲು ತನ್ನ ಅರಿವಿನಲ್ಲಿರುವ ದ್ವಂದ್ವಗಳನ್ನೇ ಹೆಕ್ಕತೊಡಗುತ್ತಾನೆ. 'ಸತ್ಯ'ವು ಚಲಿಸುವ-ಚಲಿಸದಿರುವ, ದೂರ ದಲ್ಲಿರುವ, ಬಳಿಯಲ್ಲಿಯೂ ಕಾಣಿಸಿಕೊಳ್ಳುವ, ಎಲ್ಲದರ ಒಳಗೂ ಹೊರಗೂ, ಪ್ರತಿಯೊಂದಾಗಿಯೂ ಗೋಚರಿಸುವಂಥಾದ್ದು. *(ಈಶಾವಾಸ್ಯ-5)* ಇಡೀ ಪ್ರಪಂಚದ ಮೂಲವು ಒಂದೇ 'ಸತ್ಯ'ವಾಗಿದ್ದಿರಬೇಕು. 'ಸತ್ಯ'ವು ಅಮೂರ್ತ ವಾಗುಳಿದ ಕಾರಣ ಸರ್ವೋತ್ಕೃಷ್ಟತೆಯನ್ನು ಪಡೆದ ಇದರಿಂದಲೇ ಯಾವ ನಿಯಮಕ್ಕೂ ಬದ್ಧವಲ್ಲದ ಈ ಪ್ರಪಂಚವು ಕಾಲದ ಉಪಾಧಿಯಲ್ಲಿ

ಗೋಚರವಾಗಿದೆ ಎಂದು ಋಷಿ ಕಂಡುಕೊಳ್ಳುತ್ತಾನೆ.

ಈಶಾವಾಸ್ಯದ ಮೊದಲನೆಯ ಭಾಗದಲ್ಲಿ ಋಷಿಯ ಮನದ ತೊಯ್ದಾಟವೇ ಹೆಚ್ಚು ಕಾಣುತ್ತದೆ. ವೈದಿಕ ಸಂಸ್ಕೃತಿಯ ಆದಿಮ ವರ್ತನೆಗೆ ಪ್ರೇರಕವಾದ ಸಮೂಹದ ಹಿತವನ್ನು ಸಾಧಿಸುವ ಆದರ್ಶವು ನಶಿಸುತ್ತಿರುವುದೇ ಅವನ ವ್ಯಾಕುಲತೆ ಹೆಚ್ಚಲು ಕಾರಣ. ಆರಾಧನೆಯಲ್ಲಿ ಮತ್ತು ಉಪಾಸನೆಯಲ್ಲಿ ಸ್ವಾರ್ಥ ಕಾಲಿಟ್ಟಿದೆ, ಸೊತ್ತು ಪ್ರಧಾನವೆನಿಸತೊಡಗಿದೆ ಎನ್ನುವ ಕಾರಣಕ್ಕಾಗಿ ಋಷಿ ವಿಷಣ್ಣನಾಗಿದ್ದಾನೆ. ಆದರೆ ಋಷಿಯ ನೋವು ಮೊದಲಿನಷ್ಟು ತೀವ್ರವಾಗಿ ಆಮೇಲೆ ಉಳಿದುಕೊಳ್ಳುವುದಿಲ್ಲ.

ಈಶಾವಾಸ್ಯದ ಎರಡನೆಯ ಭಾಗ (ಒಂಬತ್ತನೆಯ ಮಂತ್ರದಿಂದ ಕೊನೆಯವರೆಗೆ) ಒಂದು ತಿರುವನ್ನೂ ಪಡೆಯುತ್ತದೆ. ವಾಸ್ತವಿಕವಾಗಿ, ಈ ಉಪನಿಷತ್ತಿನ ಆರಂಭವೇ ಒಂದು .ಮಹಾತಿರುವು. ಏಕೆಂದರೆ ಇದು ಆಚರಣೆಯ ಸಂಸ್ಕೃತಿಯಿಂದ ಅರಿವಿನ ಕಡೆಗೆ ತಿರುಗುವ ಒಂದು ಮಹಾ ಸಂಕ್ರಮಣದ ಧೋರಣೆಯನ್ನು ತೋರುತ್ತದೆ. ಈ ಎರಡನೆಯ ಭಾಗದಲ್ಲಿ, ಅಮೂರ್ತವಾದ 'ಸತ್ಯ'ವನ್ನು ಅಚಲವಾಗಿ ನೆಚ್ಚಿಕೊಂಡ ಋಷಿ ಸ್ವಗತದ ಧಾಟಿಯಲ್ಲಿ ವಾಸ್ತವ ಪ್ರಪಂಚದ ಹಾಗೂ 'ಸತ್ಯ'ದ – ಅದೇ ಆದರ್ಶ ಪ್ರಪಂಚ ಕೂಡ – ನಡುವಿನ ಸಂಬಂಧವನ್ನು ಅರಸುತ್ತಾನೆ. ಇವನು ಬಾಳಿನ ಬೆನ್ನುಹತ್ತಿದ ಋಷಿ. ಇವನ ತಾತ್ವಿಕ ನೆಲೆಯ ಸಲುವಾಗಿನ ಅಲೆದಾಟ ಇಲ್ಲಿ ಕೊನೆಗೊಳ್ಳುತ್ತದೆ.

ಋಷಿಯ ದಾಹ ಇಂಗುವ ಬೆಳಕು ಈಗ ಛಕ್ಕನೆ ಮಿಂಚುತ್ತದೆ. 'ಸತ್ಯ'ದ ಸ್ವರೂಪವೇನು ? ಈ ಜೀವನದಲ್ಲಿ ಸಾಕ್ಷಾತ್ಕಾರಗೊಳ್ಳುವ ಕರ್ಮಪ್ರಪಂಚ ಅಂದರೆ ಗೋಚರಿಸುವ ಜಗತ್ತು 'ಸತ್ಯ'ವೇ ಆಗಿದೆ! ಇಷ್ಟು ಮಿಂಚಿದ್ದೇ ಋಷಿಗೆ ಮೂರ್ತ-ಅಮೂರ್ತಗಳ ನಡುವಿನ ತಂತು ಆ ಮಿಂಚಿನಲ್ಲಿ ತನ್ನ ಇರವನ್ನು ತೋರಿಸುತ್ತದೆ. ಅದರ ಸಮನ್ವಯ ದೃಷ್ಟಿಯೇ ಆದರ್ಶಜೀವನದ ಸಿದ್ಧಾಂತ. ಕ್ರಿಯಾಶೀಲವಾದ ಕರ್ಮಮಾರ್ಗದ ಬದುಕಿನ ಆರಾಧನೆಯು ಹೇಗೋ, ಹಾಗೇ ಶುದ್ಧ ಜ್ಞಾನಾನ್ವೇಷಣೆಯೂ ಅಂಧಕಾರವೇ. ಋಷಿ ಈಗ ಚರಿತ್ರೆಯನ್ನು ನೆನಪಿಸಿಕೊಳ್ಳುತ್ತಿದ್ದಾನೆ. ಸಮೂಹದ ಹಿತದೊಡನೆ ವ್ಯಕ್ತಿಯ ಹಿತವೂ ಸಹಜವಾಗಿ ಹೆಚ್ಚುವುದೆಂಬ ಹಿಂದಿನ ಆರ್ಯರ ಸಹ ಬಾಳ್ವೆಯ ಸಮನ್ವಯದ ಕ್ರಮದಲ್ಲಿ ಚಾರಿತ್ರಿಕವಾದ ಒಂದು ವ್ಯಾಖ್ಯಾನವು ನಿಧಿಯಂತೆ ಅವನಿಗೆ ಈಗ ಗೋಚರವಾಗುತ್ತದೆ. ''ಅಮೂರ್ತವಾದ 'ಸತ್ಯ'ವನ್ನೂ ದೃಶ್ಯಪ್ರಪಂಚವನ್ನೂ ಜೊತೆಯಾಗಿ ಅರಿತಾಗಲೇ ಶಾಶ್ವತವಾದುದನ್ನು

ಕಾಣಬಹುದು.'' (ಭಾವಾನುವಾದ – ಈಶಾವಾಸ್ಯ-14) – ಎಂದು ಋಷಿ ಚಿಂತಿಸುತ್ತಾನೆ.

ಇಷ್ಟಾದರೂ ಋಷಿಗೆ ತೃಪ್ತಿಯಿಲ್ಲ, ಖಚಿತತೆಗಾಗಿ, ಅರಿವಿನ ತೊಡಕಿನ ಬಗ್ಗೆ, ಅದನ್ನು ಅರಿತು ನಿವಾರಿಸುವ ಬಗ್ಗೆ, ಅವನಲ್ಲಿ ಹಠ ತೀವ್ರವಾಗುತ್ತದೆ. ಅವನ ವ್ಯಾಕುಲತೆಯೇ ಕತ್ತಲೆಯನ್ನು ಸೀಳಿದಂತೆ ಕಣ್ಣೆದುರು 'ಸತ್ಯ'ದ ಪ್ರಭೆ ಹೊಳೆಯತೊಡಗುತ್ತದೆ. ಆದರೆ 'ಸತ್ಯ' ಅರಿವಿಗೆ ಸಿಗುತ್ತಿಲ್ಲ. ಅದು ಮತ್ತೆ ಮರೆಯಾಗುತ್ತಿದೆ. ಒಂದು ಬಂಗಾರದ ತಟ್ಟೆ 'ಸತ್ಯ'ದ ಮುಖವನ್ನು ಮುಚ್ಚ ತೊಡಗಿದೆ. ಆ ತಟ್ಟೆಯ ನೆಳೆತವೇ ತನ್ನ ಮತ್ತು 'ಸತ್ಯ'ದ ನಡುವೆ ಅಡ್ಡ ನಿಂತಿದೆ – ಹೀಗೆ ಋಷಿ ಎಲ್ಲವನ್ನು ಬಗೆಯುತ್ತಾ ಭಾವಾವಿಷ್ಟನಾಗುತ್ತಾನೆ. ಅವನಿಗೆ ಅನಿಸುತ್ತದೆ. ''ಹಿರಣ್ಮಯೇನ ಪಾತ್ರೇಣ ಸತ್ಯಸ್ಯ ಅಪಿಹಿತಂ ಮುಖಮ್'' (ಈಶಾವಾಸ್ಯ-15).

''ಸತ್ಯದ ಮುಖವು ಬಂಗಾರದ ತಟ್ಟೆಯಿಂದ ಮುಚ್ಚಿಹೋಗಿದೆ.''

ಇಲ್ಲಿ ದರ್ಶನಕ್ಕೂ ರೂಪಕದ ವಾಙ್ಮಯಕ್ಕೂ ಆಪ್ತತೆ ಮೂಡಿ ಋಷಿಯ ಅಭಿವ್ಯಕ್ತಿಗೆ ಅನನ್ಯವಾದ ಕಸುವು ಸಾಧಿತವಾಗುತ್ತದೆ. ಇದು ಸ್ವತಃ ಅವನ ಅರಿವಿಗೇ ಬಂದಿರದ ಕಲಾತ್ಮಕವಾದ ಅಭಿವ್ಯಕ್ತಿ. ಆತ ಕಂಡುಕೊಂಡ ಬಂಗಾರದ ತಟ್ಟೆಯೇ ಅವನಿಗೆದುರಾದ ಭವದ ಅಂಧಕಾರ, ಭವದ ಆಕರ್ಷಣೆ. ಇದನ್ನು ಸಾಕ್ಷಾತ್ಕರಿಸಿಕೊಂಡ ಮರುಕ್ಷಣ ಋಷಿ ನಮ್ರನಾಗುತ್ತಾನೆ; ಆರ್ತನಾಗಿ ಪೂಷನ್ ದೇವತೆಯನ್ನು – ಸೂರ್ಯ ದೇವನನ್ನು – ಹೀಗೆ ಪ್ರಾರ್ಥಿಸುತ್ತಾನೆ :

**''ತತ್ತ್ವಂ ಪೂಷನ್ ಅಪಾವೃಣು**
**ಸತ್ಯಧರ್ಮಾಯ ದೃಷ್ಟಯೇ''** – (ಈಶಾವಾಸ್ಯ-15)

– 'ಸೂರ್ಯದೇವನೇ, (ನನ್ನ ಹಾಗೂ ಸತ್ಯದ ನಡುವೆ ಅಡ್ಡನಿಂತ) ಬಂಗಾರದ ತಟ್ಟೆಯನ್ನು ಸರಿಸು. ಸತ್ಯವನ್ನೇ ಧರ್ಮವೆಂದು ಬಗೆವ ನಾನು ಅದನ್ನು ಕಾಣಬೇಕು.' ಹೀಗೆ ಋಷಿಗಾಗಿ ಪೂಷನ್ ದೇವತೆಯು ಬಂಗಾರದ ಆವರಣವನ್ನು ಸರಿಸಬೇಕಾಗಿದೆ. ಈ 'ಅನಾವರಣ' (ಸರಿಸುವಿಕೆ) ಋಷಿಯನ್ನು 'ಸತ್ಯ'ದ ಸನಿಹಕ್ಕೆ ತಲುಪಿಸುವಂತಹುದು. ತನ್ನ ಅಸಹಾಯಕತೆಯನ್ನು ಅರಿಯುತ್ತಿರುವ ಋಷಿಗೆ ದೈವಸಾನ್ನಿಧ್ಯ ದೊರೆಯುತ್ತದೆ. ಅದು ಅವನಿಗೆ ಮನದಟ್ಟಾಗುತ್ತ ಹೋದಂತೆ ಅವನ ಆರ್ತತೆಯೇ ಉಪಾಸನೆಯ ರೂಪ ತಾಳುತ್ತದೆ. ಅವನ ಅನ್ವೇಷಣೆಯು 'ಸತ್ಯ'ಕ್ಕೆ ಶರಣಾಗುತ್ತದೆ. ಹೀಗೆ ಒಂದೆರಡು ಕ್ಷಣ ಸ್ಥಾಯಿಯಾದ ಆ ಕೋಲ್ಮಿಂಚಿನಲ್ಲಿ ಪೂಷನ್ ದೇವತೆಯ ಕಿಂಚಿತ್

ಸ್ವರೂಪ ಗೋಚರಿಸುತ್ತದೆ. ಆಗ ಅವನು ಪ್ರಾರ್ಥಿಸುತ್ತಾನೆ.

**''ಪೂಷನ್ ಏಕರ್ಷೇ ಯಮ ಸೂರ್ಯ ಪ್ರಾಜಾಪತ್ಯ**
**ವ್ಯೂಹ ರಶ್ಮೀನ್ ಸಮೂಹ ತೇಜೋ**
**ಯತ್ತೇ ರೂಪಂ ಕಲ್ಯಾಣತಮಂ ತತ್ ತೇ**
**ಪಶ್ಯಾಮಿ ಯೋ ಅಸಾವಸೌ ಪುರುಷಃ**
**ಸೋ ಅಹಮಸ್ಮಿ'' – *(ಈಶಾವಾಸ್ಯ- 16)*.**

''ಪೂಷನ್ ದೇವತೆಯೇ, ಏಕೈಕನೇ, ನಿಯಾಮಕನೇ, ಪ್ರಾಣರಸಗಳ ಪೋಷಕನೇ, ಸೃಷ್ಟಿಕರ್ತನ ಮಗನೇ, ನಿನ್ನ ಕಿರಣಗಳನ್ನು ಸರಿಸು, ಚೆಲುವಾದ ಆ ನಿನ್ನ ಪ್ರತಿಮೆ ಈ ಕಂಗಳಿಗೆ ಇಳಿಯಲಿ. ನಾನೂ ಅದೇ ಮೂಲದವನು.''

ಈಗ ಋಷಿಯ ನಮ್ರತೆ 'ಸತ್ಯ'ವನ್ನು ಬಗೆವ ಆಪ್ತ ಸ್ಥಿತಿಯಾಗುತ್ತದೆ. ನೀನೂ ನನ್ನಂತೆ ಒಂದು ಸೃಷ್ಟಿ ಎನ್ನುತ್ತಾನೆ ಋಷಿ. ಸೃಷ್ಟಿಯೆನ್ನುವುದು ಒಂದು ರೂಪ; ಸೃಷ್ಟಿ ಸದ್ಯದ, ಕಣ್ಣಿಗೆ ಕಾಣುವ ರೂಪ. ಆದರೆ ಪೂಷನ್ ಒಬ್ಬ ದೇವತೆ. ''ನಿನ್ನ ದಿವ್ಯರೂಪವನ್ನು ನನ್ನಿಂದ ಮರೆಮಾಡುವುದಕ್ಕಾಗಿ ಕಿರಣಗಳಿಂದ ಕಣ್ಣು ಕುಕ್ಕಬೇಡ''

ಎಂದು ಋಷಿ ಪ್ರಾರ್ಥಿಸುತ್ತಾನೆ. ಈಗ 'ಸತ್ಯ' ಹಾಗೂ ಮೂರ್ತರೂಪಗಳ ನಿಜದ ಸುಳಿವು ಹತ್ತಿದ ಋಷಿಯ ಮನ 'ಶ್ರೇಷ್ಠ' ವಾದುದಕ್ಕೆ ನೆಗೆಯುತ್ತದೆ :

**''ವಾಯುಃ ಅನಿಲಮ್ ಅಮೃತಮ್**
**ಅಥೇದಂ ಭಸ್ಮಾಂತಂ ಶರೀರಮ್**
**ಓಂ ಕೃತೋ ಸ್ಮರ ಕೃತಂ ಸ್ಮರ**
**ಕೃತೋ ಸ್ಮರ ಕೃತಂ ಸ್ಮರ'' – *(ಈಶಾವಾಸ್ಯ – 17)***

ಋಷಿಯ ಭಾವನೆ ಹೀಗಿದೆ – ''ನನ್ನ ಪ್ರಾಣವು ಶಾಶ್ವತ ಸತ್ಯದಲ್ಲಿ ವಿಲೀನವಾಗಲಿ; ಈ ದೇಹ ಬೂದಿಯಾಗಬೇಕಾದುದು; ಅಗ್ನಿಯಂತೆ ಜ್ವಲಿಸುವ ನನ್ನ ಆತ್ಮವೇ, ನಿನ್ನ ಚರಿತ್ರೆಯನ್ನು ನೆನಪಿಸಿಕೊ, ನಿನ್ನ ಕೃತ್ಯವನ್ನು ನೆನಪಿಸಿಕೊ.'' ಇದು ಹೊಸದಾಗಿ ದೊರಕಿದ ತಾತ್ವಿಕ ನೆಲೆಯಿಂದಾಗಿ ಋಷಿ ಮಾಡುವ ಚರಿತ್ರೆಯ ಸ್ಮರಣೆ. ಅವನ ದೃಷ್ಟಿಯಲ್ಲಿ, ಈಗ ನಡೆದುಬಂದ ಪರಂಪರೆ ಬದಲಾಗಬೇಕಾಗಿದೆ. ಈಗ ಯಾವುದೂ ಅಸತ್ಯವಲ್ಲ, ಅಸೂಕ್ಷ್ಮ ವಲ್ಲ. 'ನೆನಪಿಸಿಕೊ'....'ನೆನಪಿಸಿಕೊ' ಎನ್ನುವ ಋಷಿ ನಾದಮಯ ಪ್ರಪಂಚದ ಕಡೆ ಹೊರಳುತ್ತಾನೆ. ಈ ಪ್ರಪಂಚದಲ್ಲಿ ಬದುಕು ಎಂದರೆ ವಾಗ್ರೂಪದ್ದು, ಆದ್ದರಿಂದ ನಾಗರಿಕತೆಯದು, ಹೆಚ್ಚಾಗಿ ಸ್ವಾರ್ಥವನ್ನು ತೊರೆಯುವ

ದುಡಿಮೆಯದು. ಈಗ ಋಷಿಗೆ ಮೊದಲಿನ ಗೊಂದಲವಿಲ್ಲ, ಸಂದೇಹಗಳೂ ಇಲ್ಲ. ಈಗ ದಾರಿ ಹಸನಾಗಿದೆ. ಪೂಷನ್ ದೇವತೆಗೆ ಋಷಿ ಸಲ್ಲಿಸುವ ಅನೇಕ ಪ್ರಣಾಮಗಳಲ್ಲಿ ಸ್ನೇಹದ ಮಾರ್ದವ, ಭರವಸೆಯ ಉಲ್ಲಾಸ, ಕಾಣಿಸುತ್ತದೆ.

ಇದು ನನ್ನ ಓದಿನ ಈಶಾವಾಸ್ಯ. ದಾಖಲೆಗಾಗಿ ಮಾತ್ರ ಇಂದಿಗೂ ಓದಿಸಿಕೊಳ್ಳುತ್ತಿರುವ ಉಪನಿಷತ್ತುಗಳು ಶತಮಾನಗಳಿಂದ ಕಾವ್ಯೋದ್ದೇಶವಿಲ್ಲದೆ ತೋಂಡಿಕ್ರಮದಲ್ಲಿ ಬೇರುಬಿಟ್ಟಿದ್ದು ನಿಜ. ಈ ಕ್ರಮವೇ ಅವುಗಳ ಆಧ್ಯಾತ್ಮಿಕ ಚಿಂತನೆಯನ್ನು ಪೂರ್ತಿ ಸೆರಬ್ರಲ್ ಮಾದರಿಯನ್ನಾಗಿ ಉಳಿಸಿರಲೂ ಬಹುದು. ಇಡೀ ಬದುಕನ್ನು ಜೀವಾತ್ಮ-ಪರಮಾತ್ಮಗಳ, ಇಹ-ಪರಗಳ, ತಾಂತ್ರಿಕ ತೊಂದರೆಯಾಗಿ ಒಂದು ನಮೂನೆಯ ಒಡಂಬಡಿಕೆಯಂತೆ ಪರಿಗ್ರಹಿಸುವ ಉಪನಿಷತ್ತುಗಳಲ್ಲಿ ಕಾವ್ಯದ ಬಂಧದಲ್ಲಿ ಮೊಳೆಯುವ ಚೈತನ್ಯವನ್ನು ಕಾಣಲು ಸಾಧ್ಯವಿಲ್ಲ; ಏಕೆಂದರೆ, ಉಪನಿಷತ್ತಿನ ಋಷಿಗಳಿಗೆ ಜೀವನವು ನಿರಾಕರಿಸಲು ಯೋಗ್ಯವಾದ, ಆದರೆ ಅಂಟಿನಂತಹ ಪದಾರ್ಥ.

ಆದರೆ ಈಶಾವಾಸ್ಯವು ಕಾವ್ಯದ ಆಹ್ಲಾದವನ್ನು ನೀಡುವ ಹಾಗೂ, ಭಾವನೆ ಪಡೆದುಕೊಂಡ ತಾತ್ವಿಕ ನೆಲೆಯ ಕಾರಣದಿಂದಾಗಿ ಭಿನ್ನವೆನಿಸುತ್ತದೆ. ಬಂಗಾರದ ತಟ್ಟೆಯ (ಹಿರಣ್ಮಯ ಪಾತ್ರ) ಕಾವ್ಯಮಾಧ್ಯಮವು ದೊರೆತೊಡನೆ ಋಷಿ ಕವಿಯಾಗುವ ಚುರುಕತನವನ್ನೂ ಪ್ರಾಮಾಣಿಕತೆಯನ್ನೂ ಕಾಣುತ್ತೇವೆ. ಕಾವ್ಯದ ಕಾರಣದಿಂದ ಭವದ ಒಳಗೆ ಅಲೆದಾಡುವ ಋಷಿ ಅಂಧಕಾರವನ್ನೇ ಆಗಲಿ, ಪ್ರಖರ ಕಿರಣವನ್ನೇ ಆಗಲಿ, ಒಪ್ಪಿಕೊಳ್ಳದ ಅನ್ವೇಷಕ.

ಈಶಾವಾಸ್ಯದ ಕಾಳಜಿ ಬದುಕಿನ ವಸ್ತು ವಿವರಗಳಿಂದ ತುಂಬಿ ಕಾಣುವುದಿಲ್ಲ ನಿಜ. ಇದಕ್ಕೆ ಪ್ರಚೋದನೆ ತಾತ್ವಿಕ ಕಾರಣದಿಂದ ದೊರೆತಿದೆ. ಕಲಾಕೃತಿಯಲ್ಲಿಯ ಬಂಧದ ಪರಿಶ್ರಮವೇ ಅದು ಶೋಧಿಸತೊಡಗುವ ತಾತ್ವಿಕ ನೆಲೆಯೂ ಸಹ ಆಗಿರುತ್ತದೆ. ಇಲ್ಲಿ ಆ ಬಂಧವಿಲ್ಲ ಎನ್ನುವುದೂ ನಿಜ. ಇಲ್ಲಿ ಋಷಿಗೆ ಬದುಕು ಹಿತವೆನಿಸುವುದು ಭವದ ಆಕರ್ಷಣೆಯಿಂದ ಅಲ್ಲ, ಭವದಲ್ಲಿ ಅಡಕವಾದ ಸಾಧನ ಸೌಂದರ್ಯಕ್ಕಾಗಿ. ಇಲ್ಲಿಯ ತಾತ್ವಿಕ ಸಮನ್ವಯದ ಹುಡು ಕಾಟ ಅರ್ಥಪೂರ್ಣವೆನಿಸುವುದೂ ಕೂಡ ದೈನಿಕ ಬದುಕಿನ ಉದ್ದೇಶದಿಂದ.

ಭಾವನಾತ್ಮಕ ಐಕ್ಯವೇ ಈಶಾವಾಸ್ಯದ ಹುಡುಕಾಟದ ವಸ್ತು. ಅದು ಋಷಿಗೆ ದಕ್ಕಿತು ಎನ್ನುವ ಕೊನೆಯ ಶ್ಲೋಕಗಳಲ್ಲಿ ಸಂದೇಹ-ಗೊಂದಲಗಳ ಭೀತಿ ಮಾಯವಾಗಿ ಸಾಯುಜ್ಯದ ಸಲುಗೆ ಕಾಣಿಸುತ್ತದೆ. ಹೀಗೆ ಎರಡು ವಸ್ತುಗಳನ್ನು ಅಂದರೆ ಸತ್ಯ-ಆಭಾಸಗಳನ್ನು ಎದುರು ಬದರಾಗಿಸಿ ಕಡೆದು ಕಡೆದು ತಿರುಳನ್ನು ಪಡೆಯುವ ಕ್ರಮ ಕಾವ್ಯಕ್ಕೆ ಆಪ್ತವಾದುದು.

# ರೂಪಕದ ಬೆಳಕಿನಲ್ಲಿ ಕೇನೋಪನಿಷತ್ತು

ಉಪನಿಷತ್ತುಗಳ ಪರಂಪರೆಯಲ್ಲಿ ಕೇನೋಪನಿಷತ್ತು ಎರಡನೆಯದು. ಇದು ಸಾಮವೇದಕ್ಕೆ ಸೇರಿದೆ. ಆಚಾರ್ಯ ಶಂಕರರು ವ್ಯಾಖ್ಯಾನ ಮಾಡಿದ ಮುಖ್ಯ ಉಪನಿಷತ್ತುಗಳಲ್ಲಿ ಇದೂ ಒಂದು. ಕೇನೋಪನಿಷತ್ತು ಪರಮಾತ್ಮನ ಉಪಾಸನೆಯ ವಿಧಿ-ವಿಧಾನಗಳನ್ನು ಉಪದೇಶಿಸುತ್ತದೆ. ಉಪದೇಶಿಸುತ್ತದೆ ಎನ್ನುವುದು ರೂಢಿಯಿಂದ ಬಂದ ನಂಬಿಕೆ. ನಮಗೆ ಈಗಾಗಲೇ ತಿಳಿದಿರುವ ದೃಷ್ಟಾಂತ ಹಾಗೂ ಪ್ರಮಾಣಗಳಿಂದ ಪರಮಾತ್ಮನ ಅರಿವು ಸಾಧ್ಯವಿಲ್ಲ. ಮುಂದುವರಿದು ಕೇನವು ಈ ಅರಿವು ಇಂದ್ರಿಯಗಳಿಂದಲೂ ದೊರೆಯ ಲಾರದು ಎನ್ನುತ್ತದೆ. ಆದರೆ ಮನಸ್ಸು ಬ್ರಹ್ಮನ ಬಳಿಗೆ ಚಲಿಸಬಲ್ಲದು. ಮನಸ್ಸನ್ನು ತೊಡಗಿಸಿ ಪರಬ್ರಹ್ಮದ ಉಪಾಸನೆ ಮಾಡಬೇಕು ಎನ್ನುವುದು ಕೇನದ ಸಿದ್ಧಾಂತ. ಆದರೆ ವೇದಾಂತದ ತತ್ವಚಿಂತನೆಗೆ ಇಳಿಯಲೊಪ್ಪದ ಲೌಕಿಕನಾದ ನಾನು ಕೇನವನ್ನು ಹಿಡಿದು ಕುಳಿತಾಗ ನನಗೆ ಅನಿಸಿದ್ದು ಬೇರೆ: ಈಶಾವಾಸ್ಯ ಉಪನಿಷತ್ತಿನ ಹಾಗೆ ಕೇನವೂ ಸಹ ವೈದಿಕ ಮತದ ಯಜನ ಸಂಸ್ಕೃತಿಗೆ ವಿದಾಯ ಬಯಸುವ, ಆಧ್ಯಾತ್ಮಿಕ ಎಚ್ಚರವೊಂದೇ ಜೀವಧಾರಕ, ಎನ್ನುವ ವಿಚಾರಧಾರೆ. ಇಲ್ಲಿಯ ಬದುಕನ್ನು ಇಷ್ಟಪಡುತ್ತ ಇಲ್ಲೇ ನಾವು ಸಾರ್ಥಕವೆನ್ನಿಸಿಕೊಳ್ಳಬೇಕು ಎನ್ನುವುದರ ಮೇಲೆ ಕೇನ ಒತ್ತು ನೀಡುತ್ತದೆ. ಈ ಉಪನಿಷತ್ತಿನ ಮೂರನೆಯ ಅಧ್ಯಾಯದಲ್ಲಿ ದೇವತೆಗಳ ಮಿತಿಯ ಬಗ್ಗೆ ಆಡಿಕೊಳ್ಳುವ, ಸಂಕೇತಗಳಿಂದ ಚೇಷ್ಟೆ ಮಾಡುವ ಒಂದು ಕಥೆ ನನ್ನ ಈ ಮೇಲಿನ ಅಭಿಪ್ರಾಯಕ್ಕೆ ಚಾಲನೆ ನೀಡುತ್ತದೆ. ಗುರು ಶಿಷ್ಯನನ್ನು ಎದುರಿಗೆ ಕೂರಿಸಿಕೊಂಡು ಈ ಕಥೆಯನ್ನು ಹೇಳುತ್ತಾನೆ:

''ಒಮ್ಮೆ ಹೋರಾಟದಲ್ಲಿ ದೇವತೆಗಳು ಗೆದ್ದರು. ಅವರಿಗೆ ಬ್ರಹ್ಮನ ಸಹಾಯ ಸಿಕ್ಕಿತ್ತು. ಆದರೆ ದೇವತೆಗಳು ತಾವು ಮಹಾಮಹಿಮರು, ಇದು ತಾವೇ ಗಳಿಸಿದ ಗೆಲುವು ಎನ್ನುವ ಭ್ರಮೆಯಲ್ಲಿ ತೇಲತೊಡಗಿದರು.''

''ಬ್ರಹ್ಮನಿಗೆ ದೇವತೆಗಳ ಅಹಂಕಾರ ಅರ್ಥವಾಯಿತು. ಅವನು ವೇಷ ಮರೆಸಿಕೊಂಡು ದೇವತೆಗಳ ಎದುರಿಗೆ ನಿಂತನು. ಯಾರಿಗೂ ಬ್ರಹ್ಮನನ್ನು ಗುರುತಿಸಲು ಆಗಲಿಲ್ಲ. ಆಗ ಎಲ್ಲ ದೇವತೆಗಳೂ ಗುಂಪಾಗಿ ನಿಂತುಕೊಂಡು

ಅಗ್ನಿಯನ್ನು ಕರೆದು ಹೇಳಿದರು – ''ನೀನು ಸರ್ವಜ್ಞ; ಹುಟ್ಟುವಾಗಲೇ ಎಲ್ಲವನ್ನು ಅರಿತು ಬಂದವನು. ಆದ್ದರಿಂದ ನಿನ್ನನ್ನು ಜಾತವೇದ ಎನ್ನುತ್ತಾರೆ. ಹೋಗು, ಆ ಮಾಯಾವಿ ಯಾರೆಂದು ಕಂಡುಹಿಡಿ.''

''ಅಗ್ನಿಗೆ ಇದು ಒಪ್ಪಿಗೆಯಾಯಿತು. ಅವನು ಓಡುತ್ತ ಹೋಗಿ ಬ್ರಹ್ಮನ ಮುಂದೆ ನಿಂತನು. ಬ್ರಹ್ಮನು ಕೇಳಿದನು :

''ನೀನು ಯಾರು ?''

''ನಾನು ಜಾತವೇದ; ಸರ್ವಜ್ಞನಾಗಿ ಅವತರಿಸಿದವನು.''

''ನಿನ್ನ ಪರಾಕ್ರಮ ಎಂತಹುದು ?''

''ನಾನು ಸುಡಬಲ್ಲೆ, ಪ್ರತಿಯೊಂದು ವಸ್ತುವನ್ನು ಸುಡಬಲ್ಲೆ.''

''ಹಾಗಾದರೆ ಇದನ್ನು ಸುಡು.'' –

– ''ಬ್ರಹ್ಮನು ಅಗ್ನಿಯ ಎದುರಿಗೆ ಒಂದು ಹುಲ್ಲಿನ ಕಡ್ಡಿಯನ್ನು ಇಟ್ಟು ಹೇಳಿದನು. ಅಗ್ನಿ ಪ್ರಜ್ವಲಿಸಿದ, ಕಡ್ಡಿಯ ಕಡೆಗೆ ಧಾವಿಸಿದ. ಆದರೆ ಕಡ್ಡಿ ಸುಡಲಿಲ್ಲ. ಅಗ್ನಿ ಅಲ್ಲಿಂದಲೇ ದೇವತೆಗಳ ಬಳಿ ಮರಳಿ ಬಂದು 'ಆ ಮಾಯಾವಿ ಯಾರೆಂದು ತಿಳಿಯಲಿಲ್ಲ' ಎಂದನು. ಈಗ ದೇವತೆಗಳು ಮರುತ್ತನ್ನು ಅಟ್ಟಿದರು. ಮರುತ್ತು ಗಾಳಿಯಾಗಿ ರಭಸದಿಂದ ಬೀಸುತ್ತ ಬ್ರಹ್ಮನ ಬಳಿಗೆ ಧಾವಿಸಿ ಬಂದು ನಿಂತನು. ''ನಾನು ಮಾತರಿಶ್ವ'' ಎಂದು ಘೋಷಿಸಿದನು. ಬ್ರಹ್ಮ ಅದನ್ನು ಲೆಕ್ಕಿಸದೆ ಪ್ರಶ್ನೆ ಹಾಕಿದ :'' –

''ನಿನ್ನ ಪರಾಕ್ರಮವಾದರೂ ಎಂತಹುದು ?''

''ನಾನು ಬಿರುಗಾಳಿಯಾಗಿ ಎಲ್ಲವನ್ನೂ ಹಾರಿಸುವ ಶಕ್ತಿಯುಳ್ಳವನು. ನನ್ನ ಶಕ್ತಿ ಅಪಾರ.''

''ಇಗೋ, ಇದನ್ನು ಹಾರಿಸು ಹಾಗಾದರೆ'' – ಬ್ರಹ್ಮ ಅದೇ ಹುಲ್ಲುಕಡ್ಡಿಯನ್ನು ತೋರಿಸುತ್ತ ಹೇಳಿದನು. ಮರುತ್ತು ತನ್ನೆಲ್ಲ ಶಕ್ತಿಯನ್ನು ಬಳಸಿ ಹುಲ್ಲುಕಡ್ಡಿಯ ಮೇಲೆ ಬೀಸಿದನು. ಆದರೆ ಕಡ್ಡಿ ಅಲುಗಾಡಲೂ ಇಲ್ಲ. ಅವನು ಹೊರಳಿ ದೇವತೆಗಳತ್ತ ಓಡಿ ಬಂದು ತನ್ನಿಂದ ಆಗಲಿಲ್ಲ ಎಂದನು.''

ಇದು ದೇವತೆಗಳಿಗೆ ದಿಗಿಲು ಹುಟ್ಟಿಸಿತು. ಎಲ್ಲರೂ ಸೇರಿ ಸಮಾಲೋಚಿಸಿದ ನಂತರ ಇಂದ್ರನ ಮರೆ ಹೊಕ್ಕರು – ''ಓ, ಮಘವನ್, ನೀನು ಇಂದ್ರ. ನೀನು ಈ ಮಾಯಾವಿ ಯಾರೆಂದು ಕಂಡುಹಿಡಿ.'' ಆಗ ಇಂದ್ರನು ಬ್ರಹ್ಮನೆಡೆಗೆ ತೆರಳಿದನು. ಆದರೆ ಆ ಮಾಯಾವಿ ಇಂದ್ರನಿಗೆ ಕಾಣಿಸಿಕೊಳ್ಳಲಿಲ್ಲ. ಇದರಿಂದ ಗೊಂದಲಕ್ಕೆ ಒಳಗಾದ ಇಂದ್ರನು ಚಿಂತಾಕ್ರಾಂತನಾಗಿ ನಿಂತಿದ್ದಾಗ ಅವನ ಮುಂದೆ ಉಮಾದೇವಿಯು

ಕಾಣಿಸಿಕೊಂಡಳು. ಉಮೆ ಹಿಮಾಲಯನ ಮಗಳು. ಅವಳು ಸಾಕ್ಷಾತ್ ವಿದ್ಯೆ. ಆ ಮಾಯವಿಯ ಬಗ್ಗೆ ಇಂದ್ರನು ಉಮಾದೇವಿಯನ್ನು ಕೇಳಿದನು.''

ಉಮಾದೇವಿ ಹೇಳಿದಳು -''ಅವನು ಬ್ರಹ್ಮ.''

ವಿಸ್ಮಯದಿಂದ ಮೂಕನಾಗಿ ನಿಂತ ಇಂದ್ರನಿಗೆ ಮತ್ತೆ ಹೇಳಿದಳು – ''ನಿಮಗಾಗಿ ಅವನು ಜಯವನ್ನು ತಂದುಕೊಟ್ಟನು. ಆದರೂ ನೀವು ಅದನ್ನು ಸ್ವಯಾರ್ಜಿತವೆಂದು ಬಗೆಯುತ್ತ ಹಮ್ಮು ತೋರಿಸುತ್ತಿದ್ದೀರಿ.''

* * *

ಕ್ರಿಸ್ತಪೂರ್ವ ಎಂಟನೆಯ ಶತಮಾನದ ಹೊತ್ತಿಗೆ ರಚನೆಯಾಗಿರ ಬಹುದಾದ ಕೇನೋಪನಿಷತ್ತಿನ ಈ ಕ್ಷುಲ್ಲಕವೆಂದು ತೋರುವ ಕಥಾನಕವು ವೈದಿಕ ಕರ್ಮಭಾಗದಲ್ಲಿ ಪ್ರತಿಷ್ಠಿತರಾದ ಇಂದ್ರಾದಿ ದೇವತೆಗಳನ್ನು ಗೇಲಿಮಾಡುವ ಮೂಲಕ ಸಾಧಿಸುವುದೇನು ಎಂದು ಈಗ ಪರಿಶೀಲಿಸ ಬೇಕಾಗಿದೆ. ಕೇನೋಪನಿಷತ್ತು ಸಂವಾದದ ರೂಪದಲ್ಲಿದೆ. ಈ ಸಂವಾದವು ಗುರುಶಿಷ್ಯರ ನಡುವೆ ನಡೆದಿದೆ. ಶಿಷ್ಯ ಎದುರಿಗೆ ಕುಳಿತಿದ್ದಾನೆ. ಅವನ ಮನಸ್ಸಿನ ತುಂಬ ದೇವತೆಗಳ ಮಹಿಮೆ ತುಂಬಿಕೊಂಡಿದೆ. 'ಇಹ'ವನ್ನು ಅದರ ಕ್ಷುದ್ರತೆ ಮತ್ತು ಅಗತ್ಯದೊಡನೆ ಮನಗಂಡು ವಿವೇಕಿಯಾಗಿ ತಣ್ಣಗೆ ಕುಳಿತು ಗುರು ಇಂದ್ರಾದಿ ದೇವತೆಗಳ ಬಗ್ಗೆ ಕಥೆ ಕಟ್ಟುತ್ತಾ ಶಿಷ್ಯನ ನಂಬುಗೆಯಲ್ಲಿ ತಲ್ಲಣ ಹುಟ್ಟಿಸುತ್ತಾನೆ. ಅಟ್ಟಹಾಸ ಮಾಡುವ ದೇವತೆಗಳು ಕುಬ್ಜರಾಗುವ, ಅನಾತ್ಮಜ್ಞ ನಾದ ದೊರೆ ಇಂದ್ರ, ತನ್ನ ಅಜ್ಞಾನ-ಪ್ರತಿಷ್ಠೆಗಳಿಂದಾಗಿ ಸಾಮಾನ್ಯನಂತೆ ತೋರತೊಡಗುವ ಈ ಕಥಾನಕದ ಉದ್ದೇಶವು ನಂಬುಗೆಯನ್ನು ನಿರ್ನಾಮ ಗೊಳಿಸುವುದು ಮತ್ತು ಬೆಚ್ಚಿ ಬೀಳಿಸುವುದು, ಹೀಗೆ ಹದಗೊಳ್ಳುವ ಶಿಷ್ಯನನ್ನು ಆಧ್ಯಾತ್ಮಿಕ ಅನ್ವೇಷಣೆಯಲ್ಲಿ ತೊಡಗಿಸುವುದು. ಕಥೆ ಹೇಳಿದಂತೆ ಮಾಡಿದ ಗುರು ಶಿಷ್ಯನ ಆರಾಧ್ಯ ದೈವಗಳನ್ನು ಒದ್ದು ಬೀಳಿಸುತ್ತಾನೆ. ತಳಮಳಕ್ಕೆ ಸಿಲುಕಿದ ಮನದಲ್ಲಿ ಸಂದೇಹ ಮತ್ತು ಜಿಜ್ಞಾಸೆಗಳನ್ನು ಮೂಡಿಸುವುದು ಗುರುವಿಗೆ ಸದ್ಯ ಮುಖ್ಯವಾಗಿದೆ. ವಿಚಲಿತನಾದ ಶಿಷ್ಯ ಗುರುವನ್ನು ಕೇಳುತ್ತಾನೆ.

– ''ಹಾಗಾದರೆ ತೋಳ್ಬಲದಿಂದ ಗೆಲ್ಲಬೇಕೆನ್ನುವ, ಕಣ್ಣಿನಿಂದ ಕಾಣಬೇಕೆನ್ನುವ, ಅರಿಯಲು ಬುದ್ಧಿಯನ್ನು ಬಳಸುವ, ಈ ದೇವತೆಗಳಲ್ಲಿ ಯಾರೂ 'ನಿಜ'ವನ್ನೂ ಅರಿತವರಲ್ಲ! ಈ 'ಸತ್ಯ' ರೂಪನಾದ 'ಬ್ರಹ್ಮ' ಯಾಕೆ ಅಗಮ್ಯ ರಹಸ್ಯ? 'ಬ್ರಹ್ಮ'ದ ಸ್ವರೂಪವಾದರೂ ಎಂತಹುದು? ನಾವು ಇಂದ್ರಿಯ ಸಿದ್ಧಾಂತದವರು. ಅಂತೆಯೇ ನಮ್ಮ ದೇವತೆಗಳೂ ಸಹ ಇಂದ್ರಿಯ

ಸಿದ್ಧಾಂತದವರು. ಈ ಇಂದ್ರಿಯಗಳಿಗೆ ಪ್ರೇರಣೆ ಹೇಗೆ ಸಿಗುತ್ತದೆ?''

ಈ ಸಂದೇಹಗಳ ನಿವಾರಣೆಗೆ ಗುರು ನೀಡುವ ಸಮಾಧಾನ ಅವನನ್ನು ಆತ್ಮದ ಸಾಕ್ಷಾತ್ಕಾರಕ್ಕೆ, ಆಧ್ಯಾತ್ಮಿಕ ಅನುಭವಕ್ಕೆ ಸಿದ್ಧಗೊಳಿಸುವುದಾಗಿದೆ. ಇದು 'ಸತ್ಯ'ದ ಕುರಿತು ಪಡಕೊಂಡ ಅನುಭವಗಳನ್ನು ಎದುರು ನಿಲ್ಲಿಸಿಕೊಂಡು ಅಲ್ಲಿ ಬೀಳುವ ನೆರಳನ್ನು ಅಳಿಸುತ್ತ ನಿಜಕ್ಕಾಗಿ ಕಾವಿಗೆ ಕೂರುವಂತಿದೆ.

* * *

ತುಂಬ ಮುಖ್ಯವಾದ ರಹಸ್ಯದ ಬಗ್ಗೆ ಮಾತನಾಡುವಾಗಿನಂತೆ ಕಿವಿಯೊಳಗೆ ಮೆಲುದನಿಯಲ್ಲಿ ಉಲಿಯುವಂತಿರುವ ಉಪನಿಷತ್ತುಗಳನ್ನು – ಉಪನಿಷತ್ತುಗಳ ಅರ್ಥವೇ: ಆಪ್ತತೆ, ರಹಸ್ಯದ ಬೋಧನೆ ಹಾಗೂ ಅರಿಯಲು ಬೇಕಾದ ಸ್ವಾತಂತ್ರ್ಯ – ಓದಿದಾಗ ನಾವು ಎರಡು ಬಗೆಗಳನ್ನು ಕಾಣುತ್ತೇವೆ. ಮೊದಲನೆಯದು, ಈಶಾವಾಸ್ಯದಲ್ಲಿ ಕಾಣುವ ರೀತಿಯದು; ಅಂದರೆ ಕಾವ್ಯದ ಮಾಧ್ಯಮದಲ್ಲಿ ನಂಬುಗೆ ರೂಢವಾಗುತ್ತ ಶ್ರದ್ಧೆ ಹೆಚ್ಚುವ ರೀತಿ. ಎರಡನೆಯ ಬಗೆಯನ್ನು ಕೇನೋಪನಿಷತ್ತಿನಲ್ಲಿ, ಕಠ, ಛಾಂದೋಗ್ಯ, ಬೃಹದಾರಣ್ಯಕ ಮೊದಲಾದ ಮುಖ್ಯ ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಇಲ್ಲಿ ಈಶಾವಾಸ್ಯದ ಧಾವಂತವಿರುವುದಿಲ್ಲ; ಅದರ ಒಂಟಿತನ, ಪ್ರಿಯವಾಗುವ ಏಕಾಂತ, ಇಲ್ಲಿಲ್ಲ. ಈಶಾವಾಸ್ಯದ ಸಾಕ್ಷಾತ್ಕಾರ ಬುದ್ಧಿಗಮ್ಯವಲ್ಲ. ಈ ಎರಡನೆಯ ಬಗೆಯ ಉಪನಿಷತ್ತುಗಳಲ್ಲಿ ಕಾಣುವ ಏಕಾಗ್ರತೆ ನಿರುಮ್ಮಳವಾಗಿ ಕುಳಿತು ಚರ್ಚಿಸುವ, ಗಣಪನನ್ನು ಮಾಡುವಾಗ ಕಸಕಡ್ಡಿಗಳನ್ನು ತೆಗೆದು ಎಸೆಯುತ್ತ ಮಣ್ಣನ್ನು ಹದಗೊಳಿಸುವಂತಹುದು. ಇಲ್ಲಿ ಎಚ್ಚರ ಕಾಣಿಸುತ್ತದೆ; ವಿಸ್ಮಯಕ್ಕೊಳಗಾದ ಮಗ್ನತೆಯೂ ಇಲ್ಲಿ ಇರುತ್ತದೆ. ಎಲ್ಲವನ್ನೂ ಒಳಗೊಳ್ಳುವ ಧ್ಯಾನದಂತಹ ತನ್ಮಯತೆ ಇದು. ಕೊನೆಗೆ ವಿಸ್ಮಯ ತಾನಾಗಿ ಬಯಲಾಗುತ್ತ ಮಂತ್ರದ ಅರ್ಥವು ಶ್ರದ್ಧೆಯಲ್ಲಿ ಲೀನವಾಗುತ್ತದೆ. ಇಲ್ಲಿ ವೈಚಾರಿಕ ತೀಕ್ಷ್ಣತೆಗೆ ಅವಕಾಶವಿಲ್ಲ ಎನ್ನುವಂತಿಲ್ಲ. ಮಾತು ಚುರುಕಾಗಿ ಸಂಚರಿಸುತ್ತ ಬಳಸಿ ನಿಲ್ಲುತ್ತದೆ. ಶಿಷ್ಯ ತುಸು ಅನ್ಯಮನಸ್ಕನಾದರೂ ಸಾಕು, ಗುರುವಿನ ಮಾತಿನಲ್ಲಿ ಸರ್ವಜ್ಞತೆಯ ಧಿಮಾಕನ್ನು ಶಂಕಿಸುವ ಭೀತಿಯೂ ಇಲ್ಲಿದೆ. ಈ ಕಾರಣಗಳಿಗಾಗಿ ಎರಡನೆಯ ಬಗೆಯುಳ್ಳ ಕೇನೋಪನಿಷತ್ತು ಕೂಡ ಇಷ್ಟವಾಗುತ್ತದೆ.

ಅಂತಿಮವಾಗಿ ಆಧ್ಯಾತ್ಮಿಕ ಜಯ ದೊರೆಯುವ ಕೇನದಲ್ಲಿ ಗುರು ನಿಸ್ಸಂದಿಗ್ಧವಾದ ಆಧ್ಯಾತ್ಮಿಕ ಗುರಿಯುಳ್ಳವನು. ಗುರುವಿಗೆ 'ಆತ್ಮ'ದ, 'ಸತ್ಯ'ದ,

'ಬ್ರಹ್ಮ'ದ, ಅರಿವಿದೆ. ಅವನಿಗೆ ಎಲ್ಲವೂ ಬೆಳ್ಳಂಬೆಳಕು. ಈಗ ಶಿಷ್ಯನೊಳಗೂ ಅದನ್ನು ಬೆಳಗಿಸಬೇಕು. ಅವನಿಗೆ ಇನ್ನೂ ವೈದಿಕಮತದ ಕರ್ಮಠ ಕ್ರಿಯೆಗಳೇ ಅರ್ಥಪೂರ್ಣವಾಗಿ ತೋರುತ್ತಿವೆ. ಹೀಗಾಗಿ, ಗುರುವಿಗೆ ನೇರವಾದ ವೈಚಾರಿಕ ಸಂವಾದವು ಇಲ್ಲಿ ಪ್ರಯೋಜನಕಾರಿಯಾದೀತು ಎಂದು ಅನ್ನಿಸುವುದಿಲ್ಲ. ಆಧ್ಯಾತ್ಮಿಕ ಅನುಭವ ಬೌದ್ಧಿಕ ಸೆಣಸಾಟದಿಂದಲೂ ದೊರೆಯುವುದಿಲ್ಲ. ಅದು ತರ್ಕದ ತಪಾಸಣೆಯೂ ಅಲ್ಲ. ಅದು ತೀರಾ ವೈಯಕ್ತಿಕವಾದ ಸಾಕ್ಷಾತ್ಕಾರ.

ಕೇನದಲ್ಲಿ, ಗುರು ಶಿಷ್ಯನೊಳಗೆ ಇರುವ ಒಂದು ಚಿಕ್ಕ ಸಂದೇಹವನ್ನೇ ಬಳಸಿಕೊಳ್ಳುತ್ತಾನೆ. ಆ ಸಂದೇಹವನ್ನೇ ದೀಪ್ತಗೊಳಿಸಿ ಅವನ ಅರಿವನ್ನು ಬೆಳಗುವ ಬಗೆ ಇಲ್ಲಿ ನಮಗೆ ಹಿತವೆನಿಸುವುದು ಸಾಹಿತ್ಯಕ್ಕೆ ಒಳಗಿನದಾದ ರೂಪಕದ ಬೆಳಕನ್ನು ಇಲ್ಲಿ ಕಾಣುವುದರಿಂದ. ಈ ಕಥಾನಕವೇ ಗುರು ಆ ಕ್ಷಣದಲ್ಲಿ ಕಟ್ಟುವ ಕ್ಷುಲ್ಲಕವೆನಿಸಬಹುದಾದ ರೂಪಕ (allegory). ಕಥಾನಕ ಶಿಷ್ಯನ ಸಲುವಾಗಿ; ಆತನ ಸಂದೇಹ ಹೆಚ್ಚಲೆಂದು. ಶಿಷ್ಯನ ನಂಬುಗೆಯಲ್ಲಿ ವಿರಾಜಮಾನನಾದ ಸರ್ವಶಕ್ತನು ಸೋತಾಗ ಏನಾದೀತು ?

ಹೀಗೆ ಕಥೆ ಕಟ್ಟುವುದು ಕರ್ಮಠ ವೈದಿಕನಿಗೆ ಗುರುವಿನ ನೀಚತನವಾಗಿ ತೋರಬಹುದಾದ್ದರಿಂದ, ನೀಚತನವಾಗಿಯೇ ತೋರಲೆನ್ನುವ ಎಚ್ಚರದಿಂದ ದಿಟ್ಟತನದಿಂದ, ಸ್ವಚ್ಛಂದವಾಗಿ ಗುರು ಕಥೆ ಕಟ್ಟಿ ಗೇಲಿ ಮಾಡುವುದು. ಈ ಸ್ವಚ್ಛಂದತೆ ಆಧ್ಯಾತ್ಮಿಕ ಅನುಭವಕ್ಕೆ ಅಗತ್ಯವಾದ ಸ್ವಾತಂತ್ರ್ಯವಾಗುತ್ತದೆ. ಇಂತಹ ಸ್ವಚ್ಛಂದತೆ ಇರುವಾಗಲೇ ದೇವತೆಗಳ ರಾಜ್ಯವನ್ನು ಕೆಡಿಸಬಹುದು. ಕೇನದಲ್ಲಿ ತನ್ನ ನಂಬುಗೆಯ ಆಸರೆಯನ್ನು ಗುರುವಿನಿಂದ ಕಳೆದುಕೊಂಡ ಶಿಷ್ಯ 'ಸತ್ಯ'ದ ಅನ್ವೇಷಣೆಗೆ ಸಿದ್ಧನಾಗುತ್ತಾನೆ; ಅವನು ಗುರುವಿನ ಕಥಾನಕದ ದಾರಿಯನ್ನು ತುಳಿಯುತ್ತಾನೆ. ಗುರು ಈಗ 'ನೇತಿ' (ನಮ್ಮ ಅರಿವಿನ ಯಾವುದೂ ನಿಜವಲ್ಲ) ವಾದದಿಂದ ಇಕ್ಕಟ್ಟಾದ ದಾರಿಯಲ್ಲಿ ಶಿಷ್ಯನನ್ನು ನಡೆಸಿಕೊಂಡುಹೋಗಿ ಅವನನ್ನು ಆಧ್ಯಾತ್ಮಿಕ ಅನುಭವಕ್ಕೆ ಪಕ್ವಗೊಳಿಸುತ್ತಾನೆ.

*  *  *

ಇಲ್ಲಿ 'ಕೇನ'ದ ಬಗ್ಗೆ ಇನ್ನಷ್ಟು ಮಾಹಿತಿ ಅಗತ್ಯ. 'ಕೇನ' ಅಂದರೆ 'ಯಾರಿಂದ' ? 'ಯಾವುದರಿಂದ' ? 'ಕೇನ' ಪದದಿಂದ ಶುರುವಾಗುವ ಕಾರಣ ಇದು ಕೇನೋಪನಿಷತ್ತು. ಭಾರತೀಯ ತತ್ತ್ವಶಾಸ್ತ್ರದ ಸಾಧ್ಯತೆ ಮತ್ತು ಸ್ವಚ್ಛಂದತೆ ಬಹಿರಂಗಗೊಳ್ಳುವುದು ಇಲ್ಲಿಂದಲೇ. ಆದುದರಿಂದ ಭಾವ ಪ್ರಪಂಚದ ಮೂಲಕ ನಮ್ಮನ್ನು ಹೊಕ್ಕುವ ಈಶಾವಾಸ್ಯದಷ್ಟೇ ಕೇನವೂ ಕೂಡ

ಮುಖ್ಯವೆನಿಸುತ್ತದೆ. ತಾತ್ವಿಕ ಆವಿಷ್ಕಾರಗಳ ತಾಕಲಾಟದ ವಿಶಿಷ್ಟಕ್ರಮದಿಂದ ಕಾವ್ಯದಲ್ಲಿ ಹೇಗೋ ಹಾಗೇ, ಅಮೂರ್ತವನ್ನು ರೂಪುಳ್ಳದ್ದನ್ನಾಗಿ ಮಾಡುವ ಕೇನದ ಓದಿಗೆ ಅಗತ್ಯವಾದ ಚೌಕಟ್ಟು ಈ ರೂಪಕದ ಕಥಾನಕದಿಂದಲೇ ನಿರ್ಮಾಣವಾಗುತ್ತದೆ.

ಪ್ರಸಿದ್ಧವಾದ 'ಸಹನಾವವತು' ಎಂಬ ಶಾಂತಿಮಂತ್ರ ಮತ್ತು ಮೂವತ್ನಾಲ್ಕು ಮಂತ್ರಗಳಿರುವ ಈ ಉಪನಿಷತ್ತು ಚಿಕ್ಕದಾದರೂ ಸ್ವರೂಪ ದಿಂದ ತುಂಬ ಗಾತ್ರವುಳ್ಳದ್ದು. ನಾಮ-ರೂಪಗಳ ಮೂಲಕ ಅರಿವಿಗೆ ಬಂದ ಯಾವೊಂದೂ 'ನಿಜ'ವಲ್ಲ, 'ಪರಮ ಸತ್ಯ'ವಲ್ಲ ಎಂಬ ಅರಿವಿನ ಸ್ಥಿತಿಯ ತರಬೇತಿಯೇ ಇದರ ಗಾತ್ರ. ಇದರ ಚೈತನ್ಯವೆಲ್ಲ ಇಲ್ಲಿ ಚೆಲ್ಲುವ ಬೆರಗಿನಲ್ಲಿದೆ.

* * *

ಕೇನೋಪನಿಷತ್ತು ನಿಜಕ್ಕಾಗಿ ಕಾವಿಗೆ ಕೂರುವ ಕ್ರಮವನ್ನು ಪರಿಶೀಲಿಸಲು ಇದೀಗ ತಕ್ಕ ಸಮಯ. ನಮ್ಮ ಬಾಳುವೆಯೇ ದೊಡ್ಡದು, ಇದರೊಳಗೇ ಎಲ್ಲ ಆಧ್ಯಾತ್ಮಿಕ ಅನುಭವವೂ ಅರ್ಥಪೂರ್ಣವಾಗಬೇಕಾಗಿದೆ – ಎನ್ನುವ ಈ ನಿಲುವನ್ನು ತಾಳುವ ಕೇನಕ್ಕೆ, ಇದರ ಒಟ್ಟೂ ಆಶಯಕ್ಕೆ ಬಲ ಬರುವುದು ಇಲ್ಲಿಯ ಈ ಶಾಂತಿಮಂತ್ರದಿಂದ :

''**ಓಂ ಸಹನಾವವತು, ಸಹ ನೌ ಭುನಕ್ತು**
**ಸಹ ವೀರ್ಯಂ ಕರವಾವಹೈ**
**ತೇಜಸ್ವಿ ನಾವಧೀತಮಸ್ತು ಮಾವಿದ್ವಿಷಾವಹೈ**
**ಓಂ ಶಾಂತಿಃ ಶಾಂತಿಃ ಶಾಂತಿಃ**'' – ಇದರ ಆಶಯ ಹೀಗಿದೆ :

''ನಾವಿಬ್ಬರೂ ಒಟ್ಟಿಗೆ ರಕ್ಷಣೆ ಪಡೆಯೋಣ; ನಾವಿಬ್ಬರೂ ಒಟ್ಟಿಗೇ ಊಟಮಾಡೋಣ; ನಾವಿಬ್ಬರೂ ಜೊತೆ ಜೊತೆಯಾಗಿ ಬಲವನ್ನು ಹೆಚ್ಚಿಸಿಕೊಳ್ಳೋಣ; ನಮ್ಮಿಬ್ಬರ ನಡುವೆ ಹಗೆತನ ಬೇಡ, ನಮಗೆ ಆಧ್ಯಾತ್ಮಿಕ ನೆಮ್ಮದಿ ಸಿಗಲಿ; ನಮಗೆ ಆಧಿಭೌತಿಕ ಶಾಂತಿ ದೊರೆಯಲಿ; ನಮಗೆ ಆಧಿ ಭೌತಿಕ ರಕ್ಷಣೆ ಪ್ರಾಪ್ತವಾಗಲಿ.''

ಈ ಮಂತ್ರದ ಉಪದೇಶ ಸಹಬಾಳ್ವೆ, ಸಹಬಾಳ್ವೆಯೇ ಇದರ ಹಂಬಲ. ಈಶಾವಾಸ್ಯದ ಶಾಂತಿಮಂತ್ರವಾದ ''ಓಂ ಪೂರ್ಣಮದಃ ಪೂರ್ಣಮಿದಂ'' ಮತ್ತು ನಂತರದ

''ಈಶಾವಾಸ್ಯಮಿದಂ ಸರ್ವಂ'' ಇವುಗಳ ನೇರವಾದ ಒತ್ತು ಪೂರ್ಣ ದೃಷ್ಟಿ ಸಿದ್ಧಾಂತದ ನೈತಿಕತೆಯ ಮೇಲಿದ್ದರೆ, ಇಲ್ಲಿಯದು ಅದೇ ನಿರೀಕ್ಷೆಯುಳ್ಳ,

ಹೆಚ್ಚು ಮಾನವೀಯ ಸಂವೇದನೆಯ ಸಹಬಾಳ್ವೆಯದು. ಕೇನೋಪನಿಷತ್ತಿನ ಗುರು ಹೇಳುತ್ತಾನೆ :

**"ಇಹ ಚೇದವೇದೀದಥ ಸತ್ಯಮಸ್ತಿ**
**ನ ಚೇದಿಹಾವೇದೀನ್ಮಹತೀ ವಿನಷ್ಟಿಃ**
**ಭೂತೇಷು ಭೂತೇಷು ವಿಚಿತ್ಯ ಧೀರಾಃ**
**ಪ್ರೇತ್ಯ ಅಸ್ಮಾಲ್ಲೋಕಾದಮೃತಾ ಭವಂತಿ"** – (*ಕೇನ II-5*)

ಇದರ ಆಶಯವೇನೆಂದರೆ ಈ ಬಾಳಿನಲ್ಲಿಯೇ ಪರಮ ಸತ್ಯದ ಸಾಕ್ಷಾತ್ಕಾರವಾಗಬೇಕು. ಆದಿಲ್ಲದ ಈ ಜನ್ಮ ಹಾಳುಬಿದ್ದಂತೆಯೇ. ಈ ಜನ್ಮದಲ್ಲಿಯೇ 'ಸತ್ಯ'ದ ದರ್ಶನ ಎಷ್ಟು ಅಗತ್ಯವೋ ಅಷ್ಟೇ ಅಗತ್ಯ ಸಹಬಾಳ್ವೆ ಕೂಡ.

ನೈತಿಕತೆಯೇ ಪರಮಧರ್ಮ ಎನ್ನುವ ಈಶಾವಾಸ್ಯದ ಮೊದಲ ಮಾತು ಮತ್ತೂ ಹೆಚ್ಚು ಘನವಾಗಿ ವ್ಯಕ್ತಿತ್ವದಲ್ಲಿ ಲೀನವಾಗುವುದನ್ನು ಕೇನದ ಶಾಂತಿಮಂತ್ರದಲ್ಲಿ ಕಾಣುತ್ತೇವೆ. (ಗಾಂಧೀಜಿ ತಮ್ಮ ಆತ್ಮಚರಿತ್ರೆಯ ಆರಂಭದಲ್ಲಿ 'Essence of religion is morality' ಎಂದು ಇದನ್ನೇ ನೆನಪಿಸುತ್ತಾರೆ.) ಈಶಾವಾಸ್ಯದ ಪ್ರಕಾರ ಒಬ್ಬೊಂಟಿಯಾಗಿದ್ದರೂ ಮನುಷ್ಯ ನೀತಿವಂತ ಮಾರ್ಗದಲ್ಲಿ 'ನಿಜ' ವನ್ನು ಕಾಣಬಹುದು. ಆದರೆ ಕೇನದಲ್ಲಿ ಸಹಬಾಳುವೆಯೇ ಆಧ್ಯಾತ್ಮಿಕ ಅನುಭವಕ್ಕೆ, 'ನಿಜ'ಕ್ಕೆ ದಾರಿ. ಈಶಾವಾಸ್ಯಕ್ಕಿಂತ ಕೇನದಲ್ಲಿಯೇ ಸಹಬಾಳ್ವೆಯ ಬಗ್ಗೆ ಹೆಚ್ಚಿನ ಗಮನ ಮತ್ತು ಆಗ್ರಹ ಕಾಣಿಸುತ್ತವೆ. ಆದರೆ ಈ 'ವಿಶ್ವವೇ ದೇವಾಲಯ' ಎನ್ನುವ ಕಲ್ಪಿತ ಮನೋಭಾವದ, ಅಂತಹ ಕಲ್ಪನೆಯ ದೆಸೆಯಿಂದಲೇ ಸಾಚಾ ಎನ್ನಿಸಿಕೊಳ್ಳಲು ಹೆಣಗಾಡಬೇಕಾದ ಈಶಾವಾಸ್ಯದ ಮೂಲಪ್ರೇರಣೆಗಿಂತ, ಕಣ್ಣಿಗೆ ಕಟ್ಟುವ, 'ನೌ' (ನಾವಿಬ್ಬರು) ಎನ್ನುವ ದೈನಂದಿನದ ಒಳಬಳಕೆಯ ಮಾತಿನ ಕೇನೋಪನಿಷತ್ತಿನ ಪ್ರಥಮ ಪ್ರೇರಣೆಯು ಪರಿಣಾಮದಿಂದ ಹೆಚ್ಚು ಆಪ್ತವೆನಿಸುತ್ತದೆ. ನಮ್ಮ ಆಧ್ಯಾತ್ಮಿಕ ವ್ಯಕ್ತಿತ್ವಕ್ಕಿಂತ ಇಂದ್ರಿಯಸಿದ್ಧಾಂತದ ವ್ಯಕ್ತಿತ್ವಕ್ಕೆ ನೇರವಾಗಿ ದೇವತೆಗಳೆನ್ನಿಸಿಕೊಂಡ ಇಂದ್ರಾದಿಗಳ ಸೋಲಿನ ಕಥಾನಕಕ್ಕೂ ಸಹಬಾಳ್ವೆಯ ಪ್ರೇರಣೆಯೇ ಚಾಲನೆ ನೀಡುತ್ತದೆ. ಇದಿಷ್ಟೂ ಇಲ್ಲಿ ಕಾವ್ಯಕ್ಕೆ ಸಂವಾದಿಯಾಗಬಲ್ಲ ಕೇನದ ಶಾಂತಿಮಂತ್ರದ ಪ್ರಸನ್ನಶೈಲಿಯಿಂದಲೇ ಕಾಣುತ್ತದೆ. ದಿನನಿತ್ಯದ ಒಟ್ಟಿಗೆ ಊಟಮಾಡುವ, ಓದುವ, ಒಟ್ಟಿಗೆ ಪ್ರವರ್ಧಮಾನರಾಗುವ, ದ್ವೇಷಿಸಿಕೊಳ್ಳದಿರುವ ಪರದಾಟಗಳೇ ಶೋಭಾಯಮಾನವಾಗಿ ಬೆಳಗಿ ನಮಗೆ ಪ್ರಿಯವೆನಿಸುತ್ತವೆ. ಈ ಬದುಕಿನೊಳಗೆ ನಮಗೆ

ಆಧ್ಯಾತ್ಮಿಕ ಅನುಭವ ದಕ್ಕಬೇಕು ಎನ್ನುವ ಗುರು ನಮ್ಮ ದೈನಂದಿನಗಳ ಮೂಲಕವೇ ನಾವು 'ನಿಜ'ಕ್ಕಾಗಿ ಕಾವಿಗೆ ಕೂರಬೇಕೆನ್ನುತ್ತ ನಿತ್ಯದ ಬದುಕಿನ ಕ್ರಿಯೆಗಳನ್ನೇ ಆಧ್ಯಾತ್ಮಿಕ ಚಟುವಟಿಕೆಗೆ ಅದಲು ಬದಲಾಗಿಸುತ್ತಾನೆ.

* * *

ಹೀಗೆ ಸಾಹಚರ್ಯ-ಸಹಬಾಳ್ವೆಗಳಿಂದ ಮಾತ್ರ ಪಕ್ವಗೊಳ್ಳಬೇಕಾದ ಮನುಷ್ಯನ ಆಧ್ಯಾತ್ಮಿಕ ಸಾಧನೆ ವೈಯುಕ್ತಿಕವಾಗಿ ಉಳಿಯಲು ಸಾಧ್ಯವಿಲ್ಲ. ಅವನ ಅನುಭವ ನಿಗೂಢವಾಗಿ ಉಳಿಯದೆ ಭಾಷೆಯಲ್ಲಿ ತರ್ಜುಮೆಗೊಂಡು ತನ್ನೊಡನೆ ಸಾಹಚರ್ಯದ ವ್ರತದಲ್ಲಿ ತೊಡಗಿದವನಿಗೆ ತಲುಪಲು ಸಿದ್ಧವಾಗುತ್ತದೆ. ಇದನ್ನು ಮನದಟ್ಟು ಮಾಡಿಕೊಂಡಿದ್ದ ಕೇನದ ಗುರು ಆಧ್ಯಾತ್ಮಿಕ ಅನುಭವದ ಪರಮಗಮ್ಯವಾದ 'ಬ್ರಹ್ಮ'ದ – ಅದೇ ಆತ್ಮಜ್ಞಾನ, ಅದೇ 'ಸತ್ಯ'ದ ದರ್ಶನ ಕೂಡ – ಕುರಿತು ಹೀಗೆ ಮಾಹಿತಿ ನೀಡುತ್ತಾನೆ :

> ''ಬ್ರಹ್ಮ ಕಿವಿಯ ಕಿವಿ, ಮನಸ್ಸಿನ ಮನಸ್ಸು, ಮಾತಿನ ಮಾತು, ಪ್ರಾಣದ ಪ್ರಾಣ, ಕಣ್ಣಿನ ಕಣ್ಣು; ಬ್ರಹ್ಮನಿಗಾಗಿ ಈ ಎಲ್ಲ ಇಂದ್ರಿಯ ಸುಖವನ್ನು ತೊರೆಯುವವನು ಧೀಮಂತ, ಅವನು ಅಮೃತನಾಗುತ್ತಾನೆ.''
>
> ''ಈ ಸತ್ಯವನ್ನು ಯಾವ ಇಂದ್ರಿಯಗಳೂ ತೋರಿಸಲಾರವು. ನಮಗಂತೂ ತಿಳಿದಿಲ್ಲ. ಮತ್ತೊಬ್ಬನಿಗೆ ಇದನ್ನು ತಿಳಿಸುವುದು ಹೇಗೆ? ಇದೂ ನಮಗೆ ಗೊತ್ತಿಲ್ಲ.''
>
> ''ಈ ತನಕ ತಿಳಿದಿರುವ ಎಲ್ಲಕ್ಕಿಂತ ಇದು ಬೇರೆ. ತಿಳಿಯದೆ ಉಳಿದಿರಬಹುದಾದ ಯಾವ ವಸ್ತುವಿಗಿಂತಲೂ ಇದು ಬೇರೆ. ಈ ತಿಳಿವಳಿಕೆಯನ್ನು ಮಾತ್ರ ನಮ್ಮ ಪೂರ್ವಜರು ನಮಗೆ ಬಿಟ್ಟು ಹೋದರು.''
>
> ''ಮಾತು ಇದನ್ನು ವಿವರಿಸಲಾರದು; ಆದರೆ ಇದರಿಂದ ಮಾತಿಗೆ ಆಕಾರ ದೊರೆಯುತ್ತದೆ. ಇದು ಮನಸ್ಸಿಗೆ ಹೊಳೆಯದು. ಆದರೆ ಇದರಿಂದ ಮನಸ್ಸು ಯೋಚಿಸಬಲ್ಲುದಾಗುತ್ತದೆ. ಇದನ್ನು ಕಣ್ಣು ಕಾಣದಾದರೂ ಇದರಿಂದ ಅದು ಕಾಣಬಲ್ಲದಾಗುತ್ತದೆ. ಕಿವಿ ಇದನ್ನು ಆಲಿಸಲಾರದು. ಆದರೆ ಇದರಿಂದ ಕಿವಿಗೆ ಆಲಿಸುವ ಬಲ ಬರುತ್ತದೆ. ಪ್ರಾಣ ಇದನ್ನು ರುಜುವಾತು ಪಡಿಸಲಾರದು. ಆದರೆ ಇದರಿಂದಲೇ ಪ್ರಾಣಧಾರಣವಾಗಿದೆ.

ಒಟ್ಟಿನಲ್ಲಿ ಬ್ರಹ್ಮ ನಮ್ಮ ಅರಿವು ಇರವಿನ ಒಳಗೆ ಇನ್ನೂ ಬಂದುದಲ್ಲ. ಹೀಗೆನಿಸಲು ಕಾರಣ, ನಾವು ಆರಾಧಿಸುತ್ತ ಬಂದ ಯಾವ ಆಕಾರವೂ ಇದಲ್ಲ.''

''ಸತ್ಯ ಸ್ವರೂಪವುಳ್ಳ ಬ್ರಹ್ಮನನ್ನು ದೇವತೆಗಳೂ ಗುರುತಿಸಲು ಅಸಾಧ್ಯ. ನಾನು ತಿಳಿದಿರುವೆ ಎಂದು ನಾನಂತೂ ಹೇಳಲಾರೆ. ನನಗಿದು ತಿಳಿದಿಲ್ಲ ಎನ್ನುವುದೂ ನನ್ನಿಂದ ಆಗದು. ಇಷ್ಟನ್ನು ತಿಳಿದವನು, ತಿಳಿಯುತ್ತಾನೆ; ಇದು ನಿಜ. ಆದರೆ ತನಗಿದು ತಿಳಿದಿಲ್ಲ ಎನ್ನುವುದನ್ನು ತಿಳಿಯದವರೂ ನಮ್ಮಲ್ಲಿ ಇರಬಹುದು.''

''ಬ್ರಹ್ಮದ ಬಗ್ಗೆ ಚಿಂತಿಸದವನೂ ಬ್ರಹ್ಮಜ್ಞಾನಿ ಆಗಿರಬಹುದು. ಇದನ್ನೇ ಧ್ಯಾನಿಸುವವನು ಅಜ್ಞಾನಿಯಾಗಿರಲೂ ಬಹುದು. ಜ್ಞಾನಿ ಎಂದುಕೊಂಡವನಿಗೆ ಜ್ಞಾನವಿಲ್ಲ. ಅಜ್ಞಾನಿಯೆಂದುಕೊಂಡವನಿಗೇ ಇದು ಹೊಳೆದಿರಬಹುದು.''

''ಇದೊಂದು ಎಚ್ಚರದ ಸ್ಥಿತಿಯಂತಹ ದರ್ಶನ. ಇದು ಮಿಂಚುತ್ತದೆ. ಮಿಂಚಿದಾಗ ಗ್ರಹಿಸಿದವನು ಅಮೃತತ್ವದಲ್ಲಿ ನಡೆಯುತ್ತಾನೆ. ಬ್ರಹ್ಮಸಾಕ್ಷಾತ್ಕಾರಕ್ಕೆ ಮನುಷ್ಯ ತನಗೆ ತಾನೇ ಸಾಧನವಾಗುತ್ತಾನೆ.''

''ಸತ್ಯದ ದರ್ಶನ ಈ ಬದುಕಿನೊಳಗೆ ಆಗಬೇಕು. ಇಲ್ಲದಿದ್ದರೆ ಬದುಕಿದ್ದೆಲ್ಲ ವ್ಯರ್ಥ. ಹೀಗೆ ಆಧ್ಯಾತ್ಮಿಕವಾಗಿ ಧೀಮಂತರಾದವರು ಪ್ರತಿಯೊಂದು ಚೇತನದಲ್ಲಿಯೂ ಏಕರೂಪದ ನಿಜವನ್ನು ಕಾಣುತ್ತ ಅಮೃತತ್ವದ ದಾರಿಯನ್ನು ತುಳಿಯುತ್ತಾರೆ.''

''ಎವೆಯಿಕ್ಕುವಷ್ಟು ಸಮಯ ಎಷ್ಟೋ ಅಷ್ಟು ಸಮಯ ಇದು ತೋರಬಹುದು; ಬೆಳಕಿನ ಒಂದು ಸೆಳಕಿನಷ್ಟು ಇದು ತೋರಬಹುದು. ಒಂದು ಲೌಕಿಕ ಹೋಲಿಕೆಯಿಂದ ಅರಿಯುವುದಾದರೆ, ಮನಸ್ಸು ನೆನಪಿಸಿಕೊಳ್ಳುವಾಗ ಆ ವಿಷಯದತ್ತ ಚಲಿಸುವ ಹಾಗೆ ತೋರುವಂತೆ ಮನುಷ್ಯನಿಗೆ ಸತ್ಯವು ತನ್ನತ್ತ ಚಲಿಸಿದಂತೆ ತೋರುತ್ತದೆ.''

''ಆಧ್ಯಾತ್ಮಿಕ ಅನುಭವವು ನಮ್ಮ ವ್ಯಕ್ತಿತ್ವದ ನಿಗೂಢ ಆಳವಾಗಿದ್ದರಿಂದ ಅದು ನಮಗೆಲ್ಲ ಪ್ರಿಯವಾಗುತ್ತದೆ. ಈ

ಅನುಭವದಲ್ಲಿ ನಮ್ಮ ಗಮನವಿರಬೇಕು. ಇದೇ ಇದಕ್ಕೆ ಅನಿವಾರ್ಯ ಸ್ಥಿತಿ. ಮಗ್ನತೆ, ತನ್ನ ವರ್ತನೆಯ ಪರಿಶೀಲನೆ ಹಾಗೂ, ದೈನಂದಿನ ಬದುಕಿನಲ್ಲಿ ಪ್ರೀತಿ – ಇವೇ ಆಧ್ಯಾತ್ಮಿಕ ಸಾಧನೆಗೆ ಬೆಂಬಲವಾಗುತ್ತವೆ. ಈ ಅನುಭವಕ್ಕಾಗಿ ಈ ದಾರಿಯಲ್ಲಿ ನಡೆದು ಪಾಪವನ್ನು ಗೆಲ್ಲಬಹುದು.''

ಹೀಗೆ ಇದು ಕೇನದ ರೀತಿ. ಎಲ್ಲವನ್ನೂ ಅಲ್ಲಗಳೆದು ಅಲ್ಲಗಳೆಯಲಾಗದ ನಿಗೂಢದಲ್ಲೆಲ್ಲೊ 'ನಿಜ'ವನ್ನು ಸ್ಥಾಪಿಸುವ ನೇತಿವಾದದ ರೀತಿ ಇದು. ಗುರು ಆಧ್ಯಾತ್ಮಿಕ ಪರಿಶೀಲನೆಯ ತನ್ನ ಅನುಭವವನ್ನು ಇಲ್ಲಿ ಶಾಸನಬದ್ಧಗೊಳಿಸುತ್ತಾನೆ. ಇಷ್ಟಾದರೂ ಅವನು ತನ್ನ ಗೊಂದಲವನ್ನು ಹೇಳಿಕೊಳ್ಳದೆ ಇರಲಾರನು. ಅಂದರೆ ಅರಿತದ್ದು ಸಹ 'ಅದು' ಆಗದಿರಲೂಬಹುದು – ಎನ್ನುವ ಗೊಂದಲ. ಎಷ್ಟೋ ಶತಮಾನಗಳು ಕ್ರಮಿಸಿ ಮರೆತು ಮಲಿನಗೊಂಡ ವೈದಿಕ ಸಂಸ್ಕೃತಿಯಲ್ಲಿ ನಿಂತು ನೋಡುವ ನನಗೆ ತಾತ್ವಿಕ ಅನ್ವೇಷಣೆಗಾಗಿ ಹದಗೊಳ್ಳುವ ಈ ವ್ರತ ಇಷ್ಟವಾಗುತ್ತಿದೆ. ನಾವು ಬದುಕುವ ರೀತಿಯೇ ನಮ್ಮ ಆಧ್ಯಾತ್ಮಿಕ ಚಟುವಟಿಕೆ ಎನ್ನುವ ಕೇನ ಮನುಷ್ಯನ ಬಗ್ಗೆ ಶುಭ ನುಡಿಯುವ ಉಪನಿಷತ್ತು ಎನ್ನುವುದೂ ಹೀಗೆ ಇಷ್ಟವಾಗಲು ಕಾರಣ.

ಆದರೆ 'ಸಹನಾವವತು' ಎನ್ನುವ ಶಾಂತಿಮಂತ್ರದಲ್ಲಿ ಹಾಗು ದೇವತೆಗಳು ಸೋಲುವ ಒಂದು ಕಥಾನಕದಲ್ಲಿ ನಾವು ಕಾಣುವ ಇದರ ವಾಗ್ರೂಪದ ಸೌಂದರ್ಯ ಉಳಿದ ಭಾಗಗಳಲ್ಲೆಲ್ಲೂ ಕಾಣುವುದಿಲ್ಲ. ನಿರೂಪಣೆಯ ಬಗ್ಗೆ ನಿರುತ್ಸಾಹ ಅರ್ಥವಾಗುವುದಿಲ್ಲ. ಅಥವಾ ಧಾವಂತ ವಿಲ್ಲದ ಇದರ ಭೂಮಿಕೆಯಿಂದಾಗಿ ನವಗಿದು ನಿರುತ್ಸಾಹದಂತೆ ತೋರಿತೊ!

# ಕಠೋಪನಿಷತ್ತಿನ ಹೊಸ ಭೂಮಿಕೆ

ಕಠೋಪನಿಷತ್ತು ಜೀವನದ ಬಗ್ಗೆ ತಳೆಯುವ ತಾತ್ವಿಕ ನಿಲುವು ಹಿಂದೂ ಮನಸ್ಸಿಗೆ ಆಗ ಒದಗಿದ ಹೊಸ ಭೂಮಿಕೆಯಾಗಿತ್ತು. ಈಶಾವಾಸ್ಯ ಮತ್ತು ಕೇನೋಪನಿಷತ್ತುಗಳನ್ನು ಓದಿದ ನಂತರ ಕಠವನ್ನು ಓದಿದಾಗ ಬಲಗೊಳ್ಳುವುದು ಇದೊಂದೇ ಅಭಿಪ್ರಾಯ. ಆದರೆ ಆರ್ಯರ ಈ ಧೋರಣೆ ಚರಿತ್ರೆಯ ದಾಖಲೆಗೆ ಸಿಗದೆಯೂ ನಿರಂತರವಾಗಿ ಸಮ್ಮತವಾಗಿರುವುದು ಆಶ್ಚರ್ಯಗೊಳಿಸುತ್ತದೆ.

ಕಠದ ಆರ್ಯರ ವರ್ತನೆ ಕುತೂಹಲ ಹುಟ್ಟಿಸುತ್ತದೆ. ನೀಳಕಾಯದ, ನೆತ್ತಿಯನ್ನು ದಿಟ್ಟಿಸುವ ನೋಟದ ಆರ್ಯ ಋಷಿಗಳು ನಮ್ಮ ಒಳಗಣ್ಣಿನೆದುರು ಸುಳಿಯತೊಡಗುತ್ತಾರೆ. ಸರಳರೇಖೆಯಲ್ಲಿ ನೋಡುವಾಗಲೂ ಶೂನ್ಯವನ್ನು ಬಗೆಯುವ ಮೇಕೆಗಣ್ಣಿನ ಇವರು ಋಷಿಗಳು. ಕಾಡಿನಲ್ಲಿ ಸಮೃದ್ಧವಾಗಿ ನೀರುಸಿಗುವೆಡೆ ವಾಸಿಸುತ್ತಿದ್ದ, ಇಂದ್ರಿಯಗಳನ್ನು ಒಣಗಿಸುವ ವ್ರತದಲ್ಲಿ ಮಿತವಾಗಿ ತಿನ್ನುತ್ತಿದ್ದ, ತೆಳ್ಳಗೆ ಸೀಳುನಾಯಿಯಂತಹ ಸುಂದರ ಮೈಕಟ್ಟಿನ ಋಷಿಗಳು ಜಡವ್ಯಕ್ತಿಗಳಾಗಿ ತೋರಿದರೂ ಬುದ್ಧಿಯ ಕ್ರಿಯಾಕಲಾಪದಲ್ಲಿ ತುದಿ ಮುಟ್ಟಿದವರು. ಅಮೃತತ್ವವನ್ನು ಹುಡುಕುವ ದಾರಿಯಲ್ಲಿ ಸತ್ಸಂಗ ಬಯಸಿ ತಮ್ಮಷ್ಟಕ್ಕೆ ಏಕಾಂಗಿಯಾದವರು. ಅಥವಾ ಅಲ್ಲಲ್ಲಿ ಗುಂಪು ಗುಂಪಾಗಿ ಇರುತ್ತ ಜಗತ್ತನ್ನು ನಿರಾಕರಿಸಿದವರು. ಮನುಷ್ಯನ ಮೂಲದ್ರವ್ಯವಾದ ಸಂವೇದನೆಯ ಕೈಬಿಡುತ್ತ ಅತೀಂದ್ರಿಯದ ಕುರಿತು ಭಾವುಕತೆಯನ್ನು ಬಿತ್ತಿ ಬೆಳೆಯುತ್ತ ಅಧ್ಯಾತ್ಮದ ಹೊಸ ಪಂಥ ಕಟ್ಟಿದ ಆರ್ಯ ಋಷಿಗಳನ್ನು ವೈಯುಕ್ತಿಕವಾದ ಯಾವ ಕುರುಹನ್ನೂ ಬಿಡದಂತೆ ತಡೆದ ಇವರ ಅಧ್ಯಾತ್ಮವಾದವು ಇವರ ಕುರಿತು ನಾವು ಮಾಡಬಹುದಾದ ಸ್ವಚ್ಛಂದ ಊಹೆಗೆ ಕಡಿವಾಣ ಹಾಕುತ್ತದೆ. ಒಂದು ಅಂದಾಜಿನಂತೆ ಈ ಹಿಡಿತವೇ ಅಧ್ಯಾತ್ಮದ ದೊಡ್ಡ ಸಾಧನೆ.

ಕಠೋಪನಿಷತ್ತಿನ ನಿರಂಕುಶ ಅಧ್ಯಾತ್ಮವಾದವು ಸ್ವಚ್ಛಂದತೆಯಲ್ಲ; ಸ್ವಚ್ಛಂದತೆಯ ನಿರಾಕರಣೆಯೂ ಅಲ್ಲ. ಈ ಲೋಕವೇ ಅಂತಿಮ ಸತ್ಯ ಎಂದು ನಂಬಿದವನಿಗೆ ಇದರ ಒಂದೆರಡು ಒತ್ತಾಯಗಳು ಅವನ ವ್ಯಾವಹಾರಿಕ ಪ್ರಪಂಚಕ್ಕೆ ಅಗತ್ಯವಾದೀತು ಎನ್ನಿಸುವಂಥಾದ್ದು. ಆರ್ಯರ ಆಧ್ಯಾತ್ಮಿಕ

ಸಾಧನೆಯ ಮಹತ್ವಪೂರ್ಣ ವಿವರಗಳು ನಮಗೀಗ ಕಠೋಪನಿಷತ್ತಿನಲ್ಲಿ ಲಭ್ಯವಿಲ್ಲ. ಕುರುಹನ್ನು ಉಳಿಸಿದ ಈ ಸ್ವಭಾವ ಉದ್ದೇಶಪೂರ್ವಕವಾಗಿದ್ದರೆ ಆರ್ಯರು ಅಂತಹ ಉದ್ದೇಶ ತಮ್ಮ ಚಿಂತನೆಗೆ ಪಾವಿತ್ರ್ಯವನ್ನೂ ಪ್ರಾಚೀನತೆಯನ್ನೂ ಒದಗಿಸುವುದೇ ಆಗಿರಬೇಕು. ನಾಮ ರೂಪಗಳ ಪ್ರಪಂಚ ಕ್ಷಣಿಕ, ಪ್ರೆಯೋಮಯ ಹಾಗೂ, ಸತ್ಯವಲ್ಲ ಎಂದು ನಂಬಲು ತಪಸ್ಸು ಮಾಡುತ್ತಿದ್ದ ಋಷಿಗಳಿಗೆ ಈ ಅನಾಮಧೇಯತೆ ಆಗತ್ಯವೆನಿಸಿರಬೇಕು.

ಕಠೋಪನಿಷತ್ತಿನ ಸಂದೇಶ ಸ್ಫಟಿಕ ಸ್ಪಷ್ಟವಾಗಿದೆ. ಪರಮಾತ್ಮನ ಪ್ರಶ್ನಾತೀತ ಅಧಿಕಾರವನ್ನು, ಸಾರುವುದು ಹಾಗೂ ಮನುಷ್ಯ ಅವನ ಬಳಗ ಎನ್ನುವುದನ್ನು ಕಂಡು ಹಿಡಿದು ಪರಮಾತ್ಮ-ಜೀವಾತ್ಮರ ಅಭೇದವನ್ನು ಅಂತಿಮ ವಾಗಿ ನಾರುವುದು – ಇದು ಕಠೋಪನಿಷತ್ತಿನ ಸಂದೇಶ. ಒಟ್ಟಿನಲ್ಲಿ ಅದ್ವೈತ. ಆದರೆ ಕಠದ ಋಷಿಗಳು ಲೌಕಿಕತೆಯ ಒತ್ತಡ-ಆಕರ್ಷಣೆಗಳಿಂದ ಮುಕ್ತರಾಗಿದ್ದರೇ? ಅಥವಾ ಇಂದ್ರಿಯ ಸಿದ್ಧಾಂತದ ಬದುಕನ್ನಾದರೂ ಕಠೋಪನಿಷತ್ತಿನ ತತ್ವ ಜ್ಞಾನವು ಎಷ್ಟರ ಮಟ್ಟಿಗೆ ತಿದ್ದಬಲ್ಲದಾಯಿತು? ಬಹುಶಃ ಕಠೋಪನಿಷತ್ತಿನ ವಿವರಗಳಲ್ಲೇ ಈ ಸಂದೇಹಗಳಿಗೆ ಉತ್ತರ ದೊರೆಯುತ್ತದೆ.

* * *

ನಚಿಕೇತನ ಕಥೆಯಿಂದ ಆರಂಭವಾಗುವ ಕಾರಣ ಕಠೋಪನಿಷತ್ತಿಗೆ ಮತ್ತೊಂದು ಹೆಸರು ನಚಿಕೇತೋಪಾಖ್ಯಾನ. ಕೃಷ್ಣಯಜುರ್ವೇದದ ಕಠ ಶಾಖೆಗೆ ಸೇರಿದ ಈ ಉಪನಿಷತ್ತಿನಲ್ಲಿ ನಚಿಕೇತನ ಕಥೆ ನೆಪ ಅಷ್ಟೆ. ಎರಡು ಅಧ್ಯಾಯಗಳ ಆರು ವಲ್ಲಿಗಳಲ್ಲಿ ವಿಸ್ತೃತವಾಗಿರುವ ಇದು ತನ್ನ ಎರಡನೆಯ ವಲ್ಲಿಯಿಂದ ಮುಂದುವರಿಸುವ ನಚಿಕೇತನ ಕಥೆ ನಿಜವಾಗಿಯೂ ಕೊನೆಗೊಂದು ಪ್ರಬಂಧವಾಗಿಬಿಡುತ್ತದೆ. ಆದುದರಿಂದ ತನ್ನ ಸಂದೇಶವನ್ನು ಸಾರುವುದೇ ಕಠದ ಗುರಿ.

ಈ ಉಪನಿಷತ್ತಿನಲ್ಲಿ ಥಟ್ಟನೆ ಹೊಳೆಯುವ ಗುಣವೆಂದರೆ ಕಲ್ಪನೆಯ ಸ್ವಚ್ಛಂದತೆ. ಈಶಾವಾಸ್ಯ ಮತ್ತು ಕೇನೋಪನಿಷತ್ತಿನ ಋಷಿಗಳಿಗಿದ್ದ ಬದುಕಿನ ಹಂಗು ಇಲ್ಲಿಲ್ಲ. ತನ್ನ ಹಿಂದಿನ ಋಷಿಗಳ ಈ ಹಂಗು ಕಠದ ಋಷಿಗೆ ಭಾವವಿಕಾರವಾಗಿ ತೋರುತ್ತದೆ. ಈಶಾವಾಸ್ಯದ ಋಷಿ ಮನುಷ್ಯ ಚರ್ಯೆ ತಂದುಕೊಂಡ ದುರಂತವನ್ನು ಕಂಡು ರೋದಿನಬಲ್ಲವನಾಗಿದ್ದ. ಅವನು ಕವಿಹೃದಯಿ, ಕಾವ್ಯಕ್ರಿಯೆಯನ್ನು ತಿಳಿದವನು. ಅವನ ವಿಲಾಪವು ಹೊಸ

ಸಾಧ್ಯತೆಯನ್ನು ಕಾಣಬಲ್ಲ ಭಾವಗೀತೆಯಾಗಿತ್ತು. ಕೇನೋಪನಿಷತ್ತಿನ ಋಷಿ ದಿನನಿತ್ಯದ ಪರದಾಟಗಳನ್ನು ಆಧ್ಯಾತ್ಮಿಕತೆಗೆ ಏರಿಸಬಲ್ಲ ಕನಸುಗಾರ. ಜೊತೆಯಾಗಿ ಕುಳಿತು ತಿನ್ನುವ ಕ್ರಿಯೆ ಕೂಡ ಅವನಿಗೆ ಆತ್ಮಶೋಧನೆಯ ಪ್ರತವಾಗಿತ್ತು. ತನ್ನ ಪೂರ್ವಜರನ್ನು ಬೆಚ್ಚಿಬೀಳಿಸುವ ಆಧ್ಯಾತ್ಮಿಕ ಲಹರಿ ಕಠೋಪನಿಷತ್ತಿನದು. ಇದೇ ಲಹರಿ ಮುಂದೆ ಹಿಂದೂ ಧರ್ಮದ ಮುಖ್ಯ ವಿಚಾರಧಾರೆಯಾಯಿತು. ಇದರ ತಾತ್ವಿಕ ನಿಲುವಿಗೆ ಭಗವದ್ಗೀತೆಯಿಂದ ಸಮರ್ಥನೆ ದೊರೆಯಿತು. ಎಷ್ಟೊ ಹೇಳಿಕೆಗಳು ಕಠದಿಂದ ಭಗವದ್ಗೀತೆಗೆ ಎರವಲಾಗಿ ಬಂದಿವೆ. ಹೀಗೆ ಭಾರತೀಯ ವೇದಾಂತದ ಮುಖ್ಯ ರೂಪ ಕಠದಿಂದ ಪುಟಿಯಿತು.

ಕಠೋಪನಿಷತ್ತನ್ನು ಅರಿಯಬೇಕಾದುದು ಇದೇ ಹಿನ್ನೆಲೆಯಿಂದ. ವೇದಾಂತದ ಮೂಲಕ ಮೋಕ್ಷದ, ಸಾಕ್ಷಾತ್ಕಾರದ, ಸಾಧನೆ ಆರ್ಯರ ಬದುಕಿನ ಸೋಲೋ ಗೆಲುವೋ ಯಾವುದೋ ಒಂದು ಎಂದು ತೀರ್ಮಾನಿಸಿ ಮುಗಿಸುವುದು ಬೇರೆ. ಆದರೆ ನಮಗೆ ಇವರೆಡಕ್ಕಿಂತಲೂ ಮುಖ್ಯವಾಗುವುದು ಕಠೋಪನಿಷತ್ತು ಮನುಷ್ಯ ಧರ್ಮದಲ್ಲಿ ವೇದಾಂತವನ್ನು ಸೇರಿಸುವ ರೀತಿ.

*　　　*　　　*

## ನಚಿಕೇತನ ಕಥೆ

ವಿಶ್ವಜಿದ್‌ಯಾಗದ ಸಂದರ್ಭ. ಈ ಯಾಗ ಮಾಡುವವನು ತನಗೆ ಪ್ರಿಯವಾದ ವಸ್ತುಗಳನ್ನೆಲ್ಲ ದಾನಮಾಡಬೇಕು, ಪ್ರಿಯವಾದುದನ್ನೆಲ್ಲ ದಾನರೂಪವಾಗಿ ತ್ಯಜಿಸಬೇಕು. ಯಾಗವನ್ನು ಪೂರೈಸಿದ ಆರುಣಿಯು ತನ್ನ ಹಸುಗಳನ್ನು ದಾನಮಾಡುತ್ತಿದ್ದನು. ಹಸುಗಳು ಅವನ ಸಂಪತ್ತು. ಆರುಣಿಯ ಪ್ರೀತಿಯ ಮಗ ನಚಿಕೇತನು ಅದನ್ನು ನೋಡುತ್ತ ಪಕ್ಕದಲ್ಲಿ ನಿಂತಿದ್ದನು. ನೋಡುತ್ತ ನೋಡುತ್ತ ಅವನಿಗೆ ಆ ಆಚರಣೆಯಲ್ಲಿ ಶ್ರದ್ಧೆ ಮೂಡಿತು. ''ನಾನು ತಂದೆಗೆ ತುಂಬಾ ಇಷ್ಟನಾದವನು. ನನ್ನನ್ನೂ ಈಗ ದಾನವಾಗಿ ನೀಡಬೇಕಲ್ಲ!'' – ಎಂದು ಮುಗ್ಧ ನಚಿಕೇತನಿಗೆ ಅನ್ನಿಸಿತು. ಜೊತೆಗೆ, ಅವನ ಕಣ್ಣೆದುರು ತಂದೆ ದಾನಮಾಡುತ್ತಿರುವ ಹಸುಗಳಿವೆ. ಅವುಗಳಲ್ಲಿ ಕೆಲವು ತಮ್ಮ ಕೊನೆಯ ನೀರು ಕುಡಿದಂತೆ, ಕೊನೆಯ ತುತ್ತು ಹುಲ್ಲನ್ನು ತಿಂದಂತೆ, ಕಾಣುತ್ತಿದೆ. ಈಯಲಾರದ; ಗೋಣೆತ್ತಲಾಗದ, ಮುದಿ ಹಸುಗಳು ಕೆಲವು. ಶಾಸ್ತ್ರಗಳು ಉಲಿಯುತ್ತವೆ: ಇಂತಹ ದಾನಗಳನ್ನು ಮಾಡಿದವನು 'ಅನಂದ'

ಎಂಬ ಕತ್ತಲೆಯ ಲೋಕಕ್ಕೆ ಹೋಗುತ್ತಾನೆ. ನಚಿಕೇತನಿಗೆ ಇದೆಲ್ಲ ನೆನಪಿಗೆ ಬಂದಿತು. ಶ್ರದ್ಧೆಯಿಂದ ''ತಂದೆಯೇ, ನನ್ನನ್ನು ಯಾರಿಗೆ ದಾನ ಮಾಡುವೆ ?'' ಎಂದು ಕೇಳಿದನು. ಅದನ್ನೇ ಮತ್ತೆ ಮತ್ತೆ ಕೇಳಿದಾಗ ಮುಂಗೋಪಿಯಾದ ತಂದೆ ಆರುಣಿಯು ''ಮೃತ್ಯುವಿಗೆ'' ಎಂದುಬಿಟ್ಟನು.

ಬಾಲಕ ನಚಿಕೇತ ತಂದೆಯ ಮಾತನ್ನು ನಂಬಿದನು. ಹಾಗೂ, ಹೋಗಿ ಮೃತ್ಯುವಿನ ·ಮನೆಯ ಕದ ತಟ್ಟಿದನು. ಬಾಗಿಲು ತೆರೆಯಲಿಲ್ಲ. ಆದರೂ ಮೃತ್ಯುವಿಗಾಗಿ ಕಾಯುತ್ತ ಅವನ ಅಂಗಳದಲ್ಲಿ ಮೂರು ಹಗಲು ಮೂರು ರಾತ್ರಿ ಕುಳಿತನು. ತಂದೆಯ ಮಾತನ್ನು ಶ್ರದ್ಧೆಯಿಂದ ಚಿಂತಿಸುತ್ತ ತಾನು ಈಗ ಮೃತ್ಯುವಿಗೆ ಸೇರಿದವನೆಂಬ ನಂಬುಗೆಯಿಂದ ಮೃತ್ಯುವಿಗಾಗಿ ಕಾಯುತ್ತ ನಚಿಕೇತನು ಹಸಿದು ಕುಳಿತನು. ಮೂರು ದಿನಗಳ ನಂತರ ಅಲ್ಲಿಗೆ ಮರಳಿದ ಮೃತ್ಯುದೇವನಿಗೆ ಬಾಲಕನ ಮುಗ್ಧ ನಂಬುಗೆಯೇ ಕಠೋರ ವ್ರತವಾದುದನ್ನು ಕಂಡು ಅಚ್ಚರಿಯಾಯಿತು.

ಮೂರು ದಿನಗಳಿಂದ ನಚಿಕೇತನು ಆಹಾರವನ್ನು ಮುಟ್ಟಿರಲಿಲ್ಲ, ನೀರು ಕುಡಿದಿರಲಿಲ್ಲ, ನಿದ್ದೆಯನ್ನು ಕಣ್ಣೊಳಗೆ ಕರೆದುಕೊಂಡಿರಲಿಲ್ಲ. ಅವನು ವಟು. ನಿಷ್ಠುರ ಮನಸ್ಸಿನ ಹುಡುಗನಿಗೆ ಮೃತ್ಯುದೇವತೆಯಾದ ಯಮನು ತಲೆದೂಗಿ. ''ನೀನು ಕಾಯುತ್ತ ಕುಳಿತ ಮೂರು ದಿನಗಳ ಸಲುವಾಗಿ ಮೂರು ವರಗಳನ್ನು ಕೇಳಿಕೊ'' ಎಂದು ಅನುಗ್ರಹಿಸಿದನು.

ಕಠೋಪನಿಷತ್ತಿನಲ್ಲಿ ನಚಿಕೇತನ ಕಥೆ ಇರುವುದು ಇಷ್ಟೇ. ಇನ್ನು ಮುಂದಿನದೆಲ್ಲ ಧರ್ಮದ ಆಚರಣೆಗೆ ಹಾಗೂ ಅನುಷ್ಠಾನದ ತನ್ಮಯತೆಗೆ ಸೇರಿದ ವಿವರಣೆ. ''ತಂದೆ ಆರುಣಿ ಪ್ರಸನ್ನನಾಗಬೇಕು, ಮನೆಯಲ್ಲಿ ನೆಮ್ಮದಿ ನೆಲಸಬೇಕು'' – ಎಂದು ನಚಿಕೇತನು ಯಾಚಿಸುತ್ತಾನೆ. ಎರಡನೆಯ ವರವಾಗಿ ಅವನು ಕೇಳಿಕೊಂಡದ್ದು ಅಗ್ನಿಯ ಉಪಾಸನೆಗೆ ಸೇರಿದ ರಹಸ್ಯವನ್ನು. ಅಗ್ನಿಯ ಉಪಾಸನೆಯೇ ಸ್ವರ್ಗಕ್ಕೆ ಸಾಧನ. ಸ್ವರ್ಗವು ಎಲ್ಲ ಮನುಷ್ಯರ ಕನಸಿನ ಲೋಕ. ಸ್ವರ್ಗದ ಬಗ್ಗೆ ಮನುಕುಲಕ್ಕೆ ಇರುವ ಬೆರಗು ನಚಿಕೇತನ ಮಾತಿನಲ್ಲಿ ಸೂಚಿತವಾಗುತ್ತದೆ. ಸ್ವರ್ಗದಲ್ಲಿ ಭಯವಿಲ್ಲ; ಯಮನ ಮನೆ ಸ್ವರ್ಗದಲ್ಲಿಯೇ ಇದ್ದರೂ ಅಲ್ಲಿ ಯಮನ ಶಾಸನ ನಡೆಯುವುದಿಲ್ಲ. ''ಸಾವು ಮುಪ್ಪುಗಳಿಲ್ಲದ ಅಮೃತತ್ವ ನೀಡುವ ಸ್ವರ್ಗಲೋಕವನ್ನು ಸೇರಲು ಉಪಾಯವೇನು ?'' – ಇದು ನಚಿಕೇತನು ಯಮನಿಗೆ ಹಾಕಿದ ಪ್ರಶ್ನೆ.

ಈಗ, ಆರ್ಯರ ನಿತ್ಯಕರ್ಮವಾದ ಅಗ್ನಿಯ ಉಪಾಸನೆಗೆ ಕಠೋಪನಿಷತ್ತು ಹೊಸ ಚೈತನ್ಯ ತುಂಬುತ್ತದೆ. ಅಗ್ನಿಯ ಉಪಾಸನೆಯನ್ನು

ವಿವರಿಸಿದ ನಂತರ ಮೃತ್ಯು ಹೇಳುತ್ತಾನೆ: ''ಸ್ವರ್ಗವನ್ನು ಪಡೆಯಲು ಅಗ್ನಿಯ ಉಪಾಸನೆಯೊಂದೇ ಸಾಧನ.''

ನಚಿಕೇತನ ಮಹಾತ್ವಾಕಾಂಕ್ಷೆಯ ವರ ಮೂರನೆಯದು. ಇದರಲ್ಲಿ ಆರ್ಯರು ಹೊಸ ದಿಕ್ಕಿನ ಹುಡುಕಾಟಕ್ಕೆ ನಡೆಸಿದ ಪ್ರಯತ್ನವನ್ನು ಕಾಣುತ್ತೇವೆ. ಮರಣದ ನಂತರ ಆತ್ಮದ ಅವಸ್ಥೆಯೇನು? ಕೆಲವರು ದೇಹದ ಜೊತೆಗೆ ಆತ್ಮವೂ ನಷ್ಟವಾಗುತ್ತದೆ ಎನ್ನುತ್ತಾರೆ. (ಇಲ್ಲಿ ಬಹುಶಃ ದೇಹಾತ್ಮವಾದಿಗಳಾದ ಲೋಕಾಯುತರನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಈ ಮಾತನ್ನು ಪ್ರಸ್ತಾಪಿಸಿದಂತೆ ತೋರುತ್ತದೆ.) ಮತ್ತೆ ಕೆಲವರ ನಂಬುಗೆಯ ಪ್ರಕಾರ ಆತ್ಮಕ್ಕೆ ಸಾವಿಲ್ಲ. ಇವುಗಳಲ್ಲಿ ನಿಜ ಯಾವುದು? ಈ ವಿಚಾರ ತುಂಬ ಜಟಿಲವಾದುದಾದರೂ ನಚಿಕೇತನ ದೃಷ್ಟಿಯಲ್ಲಿ ಇದೊಂದೇ ಶ್ರೇಷ್ಠವಾದ ವರ, ಇದೊಂದೇ ಕೇಳತಕ್ಕ ವರ. ಇಡೀ ಆರ್ಯಕುಲ ಈ ವರದ ಮೂಲಕ ಒಂದು ಕಗ್ಗಂಟನ್ನು ಬಿಡಿಸಿಕೊಳ್ಳಬೇಕಾಗಿದೆ. ಇದು ಸಾವಿನ ರಹಸ್ಯವನ್ನು ಭೇದಿಸುವ ಪ್ರಶ್ನೆ. ಅದರ ರಹಸ್ಯ ಸ್ಫೋಟವಾಗಿ ಆತ್ಮದ ಅರಿವು ದೊರೆತರೆ ಅದೊಂದೇ ಸಾಕು ಆರ್ಯರನ್ನು ಉದ್ಧರಿಸಲು. ಇದು ನಚಿಕೇತನ ಯೋಚನೆ.

## ಕಠೋಪನಿಷತ್ತಿನ ಆಧ್ಯಾತ್ಮಿಕ ತತ್ತ್ವಜ್ಞಾನ

ಮನುಷ್ಯನನ್ನು ನಿರ್ಭೀತಗೊಳಿಸುವ ಉಪಾಯಗಳ ಚಿಂತನೆಯಲ್ಲಿ ಕಠ ಅಧ್ಯಾತ್ಮದ ದಾರಿ ಹಿಡಿಯುತ್ತದೆ. ನಿರ್ಭೀತಿಯ ಉಪಾಯ ಈ ಲೋಕದಲ್ಲಿ ಇಲ್ಲ. ಈ ಲೋಕವು ನಿರ್ಭೀತಿಗೆ ಕಾರಣವೂ ಆಗಲಾರದು. ಪ್ರತಿಯೊಂದು ಕ್ಷಣವನ್ನು ನಾವು ಕೊಲ್ಲುತ್ತ ನಿತ್ಯಸೂತಕದಲ್ಲಿ ಪಯಣ ಹೊರಟಿರುವುದು ಪರಲೋಕಕ್ಕೆ. ಈ ಸೂತಕದ ಬದುಕಿನಲ್ಲಿ ನಾವು ಬಯಸಬಹುದಾದ ಸ್ಥಿತಿ ಎರಡೇ: ಆನಂದಮಯವಾದ ಪ್ರೇಯಸ್ಸು ಒಂದು; ಇನ್ನೊಂದು, ಶಾಶ್ವತವಾದ ಹಿತ ಎಂದು ಕರೆಯಬಹುದಾದ ಶ್ರೇಯಸ್ಸು. ಇವೆರಡೂ ನಮ್ಮನ್ನು ಮುತ್ತಿಕೊಂಡಾಗ ಶ್ರೇಯಸ್ಸನ್ನು ಆಯ್ದುಕೊಂಡವನು ಆತ್ಮದ ಸಾಕ್ಷಾತ್ಕಾರಕ್ಕೆ ಅಣಿಯಾಗುತ್ತಾನೆ; ಪ್ರೇಯಸ್ಸನ್ನು ಆಯ್ಕೆ ಮಾಡಿಕೊಂಡವನು ಆನಂದಮಯವಾದ ಈ ಲೋಕದಲ್ಲಿ ಗುರಿತಪ್ಪಿ ಬದುಕುತ್ತಾನೆ.

ಮೃತ್ಯು ಹೇಳುತ್ತಾನೆ:

**''ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನ್**
**ಅಭಿಧ್ಯಾಯನ್ ನಚಿಕೇತೋ ಅತ್ಯಸ್ರಾಕ್ಷೀ:**
**ನೈತಾಂ ಸೃಂಕಾಂ ವಿತ್ತಮಯೀಮ್ ಅವಾಪ್ತೋ**

ಯಸ್ಯಾಂ ಮಜ್ಜಂತಿ ಬಹವೋ ಮನುಷ್ಯಾ:'' *(ಕಠ)*

- ''ನಚಿಕೇತ, ನೀನು ಸರಿಯಾಗಿ ಯೋಚನೆ ಮಾಡುತ್ತಿರುವೆ. ಆನಂದಮಯವಾಗಿ ತೋರುವ, ಪ್ರಿಯವಾಗಿ ಕಾಣುವ ಪ್ರೇಯಸ್ಸಿನ ಈ ಲೋಕ ನಿನಗೆ ಬೇಡವಾಗಿದೆ. ಪ್ರೇಯಸ್ಸಿನ ಈ ಸಂಪದ್ಭರಿತವಾದ ದಾರಿಯಲ್ಲಿ ಎಷ್ಟೊಂದು ಜನ ನಡೆದಿದ್ದಾರೆ ನೋಡು. ಆದರೆ ನಿನಗೆ ಮಾತ್ರ ಇದು ಬೇಡವಾಗಿದೆ.''

ಮನುಷ್ಯನ ಶ್ರೇಯಸ್ಸನ್ನು ಬಯಸುವ ಕಠ ಹಿಡಿಮಣ್ಣಿನಲ್ಲಿ ಇರುವ ಬಂಧನದ ಮೂಲವನ್ನು ತೋರಿಸುತ್ತ ಬದುಕು ಅಧ್ಯಾತ್ಮಕ್ಕೆ ಸಾಧನ ಮಾತ್ರ; ಅದು ಸ್ವಯಂಪೂರ್ಣವೂ ಅಲ್ಲ, ಅಂತಿಮ ಸತ್ಯವೂ ಅಲ್ಲ – ಎನ್ನುವ ತಾತ್ವಿಕ ನಿಲುವನ್ನು ತಳೆಯುತ್ತದೆ. ವೇದಾಂತವು ಶ್ರೇಯಸ್ಸಿನ ಸೂತ್ರವಲ್ಲ, ಅದು ಶ್ರೇಯಸ್ಸಿನ ಉಪದೇಶ. ಅದರಿಂದ ನಡೆಯುವ ಆಧ್ಯಾತ್ಮಿಕ ಸಾಧನೆಯ ಫಲವೂ ಮನುಷ್ಯನಿಗೆ ವೈಯಕ್ತಿಕ. ಸಮಷ್ಟಿಯಲ್ಲಿ ಎಲ್ಲರ ಗುರಿ ಒಂದೇ ಆದರೂ ಅದನ್ನು ತಲುಪುವವನು ಏಕಾಂಗಿಯೇ ಆಗಿರುತ್ತಾನೆ. ತನ್ನ ಆಧ್ಯಾತ್ಮಿಕತೆಯ ದಾರಿಯನ್ನು ತಾನೇ ತಾನೊಬ್ಬನೇ ನಡೆದು ಸವೆಸಬೇಕು ಎಂದು ಉಪದೇಶಿಸುತ್ತದೆ ಕಠ. ಆದರೆ ಪ್ರೇಯೋಮಯವಾದ ಬದುಕಿನಲ್ಲಿ ಗುರಿ ನಾನಾ ರೀತಿಯಾಗಿರಬಹುದು. ಅಲ್ಲಿ ಎಲ್ಲರೂ ಕೂಡಿ ಸಾಗಬಹುದು. ಶ್ರೇಯಸ್ ಎಂದರೆ ವಿದ್ಯೆ. ಪ್ರೇಯಸ್ ಎಂದರೆ ಅವಿದ್ಯೆ. ಮಾನವ ಜನಾಂಗದ ಹಿತವು ಸಂಪತ್ತಿನ ಸೆರಗು ಹಿಡಿದ ಪ್ರೇಯಸ್ಸಿನಲ್ಲಿ ಇಲ್ಲ. ಭೋಗದಿಂದ ಒಳಿತನ್ನು ಸಾಧಿಸುವ ಮಾತು ಕುರುಡನನ್ನು ಕುರುಡ ಕೈಹಿಡಿದು ನಡೆಸಿಕೊಂಡು ಹೋದಂತೆ. ಹೀಗೆ ಆಧ್ಯಾತ್ಮಿಕ ಶ್ರೇಯಸ್ಸನ್ನು ಗಳಿಸಿಕೊಡಲಾರದ ಪಾಂಡಿತ್ಯ, ಬಹಿರ್ಮುಖ ಸ್ವಭಾವವುಳ್ಳ ಸಂಪತ್ತು – ಇವೆಲ್ಲ ಮೋಹಿತ ಜನರ ಮಹತ್ವಾಕಾಂಕ್ಷೆಗಳು. ಮೋಹಿತರ ಪಾಲಿಗೆ ''ಅಯಂ ಲೋಕೋ ನಾಸ್ತಿ ಪರಃ ಇತಿ'' *(ಕಠ 2-6)* ಅಂದರೆ ''ಇದೊಂದೇ ಲೋಕ, ಪರಲೋಕವಿಲ್ಲ''. ಹೀಗೆ ಉಲ್ಲಾಸಜನಕವಾದ ಆದರೆ ಕ್ಷಣದಿಂದ ಕ್ಷಣಕ್ಕೆ ಲಡ್ಡಾಗುತ್ತ ನಡೆಯುವ ಬದುಕನ್ನು ವಿವೇಕದಿಂದ ತಿರಸ್ಕರಿಸುವವನೇ ಧೀರ. ಈ ಸೂಕ್ಷ್ಮವನ್ನು ಧ್ಯಾನಿಸುತ್ತ ತಿಳಿಯಬೇಕು ಎನ್ನುತ್ತದೆ ಕಠೋಪನಿಷತ್ತು.

ಮನಸ್ಸು ಧ್ಯಾನಾವಸ್ಥೆಯಲ್ಲಿ ತನ್ಮಯವಾಗಬೇಕು, ಮನಸ್ಸು ಲೀನವಾಗಲು ಒಂದು ಕೇಂದ್ರಬಿಂದು ಅನಿವಾರ್ಯ ಎನ್ನುವ ಉದ್ದೇಶದಿಂದ ಕಠೋಪನಿಷತ್ತು ಓಂಕಾರವೆಂಬ ಸಂಕೇತವನ್ನು ಸೃಷ್ಟಿಸುತ್ತದೆ ಮತ್ತು, ಓಂಕಾರದ ಸಿದ್ಧಿಯನ್ನು ಪಡೆದವನ ಅವಸ್ಥೆಯನ್ನು ವಿವರಿಸುತ್ತದೆ. ಇಂತಹ

ಸಿದ್ಧಪುರುಷನ ಅವಸ್ಥೆಯಲ್ಲಿ ಆತ್ಮವೇ ಜ್ಞಾನ, ಆತ್ಮವೇ ಜ್ಞಾನಿ, ಆತ್ಮವೇ ಜ್ಞೇಯ ಹಾಗೂ ಜ್ಞಾತೃ. ಆತ್ಮಕ್ಕೆ ಹುಟ್ಟು ಸಾವುಗಳಿಲ್ಲ. ಆತ್ಮವು ಕಾರ್ಯವೂ ಅಲ್ಲ, ಕಾರಣವೂ ಅಲ್ಲ. ಆತ್ಮ ಸಾಕ್ಷಾತ್ಕಾರಕ್ಕಾಗಿ, ಅದ್ವೈತ ಸ್ಥಿತಿಯನ್ನು ತಲುಪಲು, ತತ್ವಜ್ಞಾನದ ಶ್ರವಣ-ಪ್ರವಚನಗಳು ಅನಿವಾರ್ಯ ಉಪಾಯಗಳೇನೂ ಅಲ್ಲ. ಅದಕ್ಕೆ ಬೌದ್ಧಿಕತೆಯೂ ಉಪಾಯವಲ್ಲ. ಧೀರನಿಗೆ ಮಾತ್ರ ಏಕತ್ವರೂಪದ ಆಧ್ಯಾತ್ಮಿಕ ಅನುಭವ ದಕ್ಕುತ್ತದೆ. ಈ ಅನುಭವದಲ್ಲಿ ಸೃಷ್ಟಿಯೆಲ್ಲ ಓಂಕಾರದಲ್ಲಿ ಲೀನವಾಗುತ್ತದೆ. ಹೀಗೆ ಏಕತ್ವವೊಂದೇ ಮೂಲರೂಪ.

* * *

ಬದುಕಿನ ಕ್ರಮದಲ್ಲಿ ಹುಡುಕಿಕೊಳ್ಳಬೇಕಾದ ನೆಮ್ಮದಿ ಕಠೋಪನಿಷತ್ತಿನ ವಸ್ತುವಲ್ಲ. ಅದರ ವಸ್ತು ಇಹಲೋಕದಲ್ಲಿ ಬೇಕಾಗುವ, ತನ್ನಂತೆ ಪರರ ಬಗೆಯುವ, ಏಕತೆಯ ಅದ್ವೈತವಲ್ಲ, ಪಾರಮಾರ್ಥಿಕತೆಯ ಸ್ವರೂಪದ ಅದ್ವೈತ. ಬದುಕಿಗೆ ಇರುವ ಅನೈತಿಕ ಗುಣವೆಂದರೆ ಅದು ಹೊಂದಿರುವ ಆಕರ್ಷಣೆ; ಇಷ್ಟೇ ಅಲ್ಲದೆ, ಬದುಕುವುದು ಎಂದರೆ ಹುಟ್ಟು ಮತ್ತು ಸಾವಿನ ನಡುವೆ ಸಂಚು ನಡೆಸುವುದು. ಹೀಗಾಗಿ ಈ ಲೋಕದ ಬದುಕನ್ನು ಗೌಣವಾಗಿ ಕಂಡು ಆತ್ಮದ ಬದುಕನ್ನು ಚಿಂತಿಸುವುದು ಕಠೋಪನಿಷತ್ತಿನ ದೊಡ್ಡ ಹಂಬಲ. ಅಲ್ಲಿ ಮಾತ್ರ ಅನಂತ ಸುಖ ಸಿಗಬಲ್ಲದು. ದೈಹಿಕವಾದ ಪ್ರತಿಯೊಂದು ಚಲನೆಯೂ ಅಧ್ಯಾತ್ಮಕ್ಕೆ ಸಾಧನವಾಗಬೇಕೆನ್ನುವ ಈ ಉಪನಿಷತ್ತು ಏಕಕಾಲದಲ್ಲಿ ಬದುಕಿನ ಎಲ್ಲ ಉತ್ಕಟ ಕ್ಷಣಗಳನ್ನೂ ನಿಸ್ತೇಜಗೊಳಿಸುತ್ತದೆ.

ಈಶಾವಾಸ್ಯ ಮತ್ತು ಕೇನೋಪನಿಷತ್ತುಗಳಲ್ಲಿ ಚಕಾರವನ್ನೂ ಆಡಿರದ ಪುನರ್ಜನ್ಮ ಮತ್ತು ಕರ್ಮಸಿದ್ಧಾಂತಗಳಲ್ಲಿ ನಂಬಿಕೆಯಿಡುವ ಕಠದ ಪ್ರಕಾರ ಮನುಷ್ಯ ಜನ್ಮ ಸಿಕ್ಕಿರುವುದೇ ನಮ್ಮ ಶುಭ ಕರ್ಮಗಳ ಫಲವಾಗಿ. ಹೃದಯವೆಂಬ ಆಕಾಶದಲ್ಲಿ ಮತ್ತು ಬುದ್ಧಿಯೆಂಬ ಗುಹೆಯಲ್ಲಿ ನೆಲೆಸಿರುವ, ಸತ್ಯವನ್ನು ಆಸ್ವಾದಿಸುವ, ಜೀವಾತ್ಮ-ಪರಮಾತ್ಮರಿಬ್ಬರೂ ನೆರಳು ಮತ್ತು ಬಿಸಿಲಿನಂತೆ, ಕಠದ ಋಷಿ ಜೀವ ಅಧ್ಯಾತ್ಮಕ್ಕೆ ಮಿಡಿಯುವ ಕ್ರಮ ಎಲ್ಲ ಅಧ್ಯಾತ್ಮ ಜೀವಿಗಳಲ್ಲೂ ಕಂಡು ಬರುವ ಕ್ರಮವೇ ಆಗಿದೆ. ಋಷಿಯ ಅಧ್ಯಾತ್ಮ ಸಾಧನೆಗೆ ಈ ದೇಹ ಸಾಧನ. ದೇಹ ರಥ, ಆತ್ಮ ರಥದ ಮಾಲಿಕ, ಬುದ್ಧಿ ಸಾರಥಿ, ಮನಸ್ಸು ಕಡಿವಾಣ, ಇಂದ್ರಿಯಗಳು ಕುದುರೆಗಳು, ಇಂದ್ರಿಯ ವಿಷಯಗಳಾದ ಶಬ್ದ, ಸ್ಪರ್ಶ ಮುಂತಾದವು ಕುದುರೆ ಸಂಚರಿಸುವ ಮಾರ್ಗಗಳು. ದೇಹ,

ಇಂದ್ರಿಯ, ಮನಸ್ಸು ಇವುಗಳ ಜೊತೆಗೂಡಿದ ಆತ್ಮವೇ 'ಭೋಕ್ತಾ' – ಅನುಭವಿಸುವವನು. ಕಠೋಪನಿಷತ್ತಿನ ಈ ರಥದ ರೂಪಕವನ್ನು ಎರವಲು ಪಡೆದ ಭಗವದ್ಗೀತೆ ದೇಹವನ್ನು ಅದೇ ಕ್ರಮದಲ್ಲಿ ಸಜ್ಜುಗೊಳಿಸುತ್ತದೆ.

ಶ್ರದ್ಧಾಳುವಾಗುವುದು ಎಂದರೇನು ? ವರ್ತಮಾನದ ಬದುಕಿನಲ್ಲಿ ಸಮೂಹದ ಜೊತೆಗೆ ಹೊಂದಿಕೊಳ್ಳಬೇಕಾಗಿರುವಾಗ ಪಾರಲೌಕಿಕ ಉದ್ವೇಗ ಸಾಧ್ಯವೇ ? – ಇಂತಹ ಕಾಳಜಿಗಳಿಗೆ ಕಠ ಸ್ಪಂದಿಸುವುದಿಲ್ಲ. ಇಲ್ಲಿಯ ಋಷಿಗೆ ಆಧ್ಯಾತ್ಮಿಕ ಸಾಧನೆಯಲ್ಲಿ ಅಡಕವಾಗಿರುವ ನೋವು ತಳಮಳ ಕಾಣಿಸುವುದಿಲ್ಲ. ಇದಕ್ಕೆ ಕಾರಣ, ಇಂದ್ರಿಯಗಳಿಗೆ ಪರವಶರಾದವರು ಅದ್ವೈತಾನುಭವ ಪಡೆಯದೆ ಮತ್ತೆ ಹುಟ್ಟಿ ಬರಬೇಕಾದೀತು ಎನ್ನುವ ''ಪುನರ್ಜನ್ಮ''ದ ಭೀತಿ. ಹೀಗಾಗಿ ಇಂದ್ರಿಯಗಳು ಮನುಷ್ಯನಿಗಂಟಿದ ಅನಿವಾರ್ಯ ಕೇಡು ಎನ್ನುವಂತೆ ಕಠ ಪ್ರಸ್ತಾಪಿಸುತ್ತದೆ. ಇಂದ್ರಿಯಗಳ ಮೂಲಕ ಬದುಕುವುದು ಶ್ರೇಷ್ಠ ಗುರಿಯಲ್ಲ ಎನ್ನಲು ಕಠದ ತರ್ಕ ಹೀಗಿದೆ :

''ಇಂದ್ರಿಯಗಳಿಗಿಂತ ಹೆಚ್ಚು ನಿಜವಾಗಿರುವುದೆಂದರೆ ಅವು ಗ್ರಹಿಸುವ ವಿಷಯ, ವಿಷಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿ, ಬುದ್ಧಿಗಿಂತ ಆತ್ಮ, ಆತ್ಮಕ್ಕಿಂತ ಅವ್ಯಕ್ತವಾದ ಪ್ರಕೃತಿ, ಪ್ರಕೃತಿಗಿಂತ ಪುರುಷ; ಪುರುಷನೇ ಅಂತಿಮ 'ನಿಜ'. ಪುರುಷನೇ ಅಂತಿಮವಾಗಿ 'ವಾಸ್ತವ'. ಅದೊಂದೇ ಶ್ರೇಷ್ಠಸ್ಥಿತಿ.'' ಕಠ ಹೇಳುವ ಪುರುಷ ಬಹುಶಃ 'ಪರಮಾತ್ಮ'. ''ಪುರುಷನೇ ಎಲ್ಲಕ್ಕಿಂತ ನಿಗೂಢವಾದವನು.''

ಕಠದ ಈ ನಿಲುವು ಸಾಂಖ್ಯದರ್ಶನಕ್ಕೆ ಹತ್ತಿರವಾಗಿದ್ದು, ಇಲ್ಲಿ ಮನುಷ್ಯನ ಸ್ವಭಾವಗತ ಅಡ್ಡಿಗಳೇನೇ ಇದ್ದರೂ ಅವನ ಆಧ್ಯಾತ್ಮಿಕ ಸಾಧನೆಗಾಗಿ ಆ ಎಲ್ಲ ಅಡ್ಡಿಗಳನ್ನೂ ಕಠವು ಸರಳೀಕರಿಸುತ್ತದೆ. ಉದಾಹರಣೆಗೆ, ಧೀರರು ಇಂದ್ರಿಯಗಳನ್ನು ಮನದಲ್ಲಿ ಕೇಂದ್ರೀಕರಿಸಬೇಕು, ಮನವನ್ನು ಜ್ಞಾನರೂಪದ ಆತ್ಮದಲ್ಲಿ, ಆತ್ಮವನ್ನು ಜೀವಾತ್ಮದಲ್ಲಿ, ಜೀವಾತ್ಮವನ್ನು ಪರಮಾತ್ಮನಲ್ಲಿ, ಲೀನಗೊಳಿಸಬೇಕು. ಮೃತ್ಯುವಿನಿಂದ ಬಿಡುಗಡೆ ಪಡೆಯಲು ಪರಮಾತ್ಮನ ಅರಿವೊಂದೇ ಉಪಾಯ.

* * *

ಇಷ್ಟನ್ನು ಹೇಳಿದ ನಂತರ ಕಠವು ಬಹಿರ್ಮುಖಿ ಸ್ವಭಾವದ ಇಂದ್ರಿಯಗಳನ್ನು ಅಧ್ಯಾತ್ಮ ವಿರೋಧಿಗಳನ್ನಾಗಿ ಬಣ್ಣಿಸಲು ತೊಡಗುತ್ತದೆ :

ಇಂದ್ರಿಯಗಳು ಬಹುಮುರ್ಮುಖಿಗಳು. ಚಾಪಲ್ಯ ಅವುಗಳ ತೇಜಸ್ಸು; ಅದು

ಅವುಗಳ ಸ್ವಭಾವ. ಅವುಗಳ ಪಾಲನೆಯಲ್ಲಿ ಮುಳುಗಿದವನಿಗೆ ಅಂತರಂಗದ ದಾರಿ ಕಾಣಿಸುವುದಿಲ್ಲ. ಆದರೆ ಬುದ್ಧಿವಂತನಾದ ಧೀರನು ಅಮೃತತ್ವಕ್ಕಾಗಿ ಹಾತೊರೆಯುತ್ತಾನೆ, ಇಂದ್ರಿಯಗಳನ್ನು ಬಾಹ್ಯಪ್ರಪಂಚದಿಂದ ತಡೆಯುತ್ತಾನೆ. ಅವನ ಗಮನವಿರುವುದು ಅಂತರ್ಯಾಮಿಯಾದ ಪರಮಾತ್ಮನ ದರ್ಶನದ ಕಡೆಗೆ. ಮೂಢರ ವರ್ತನೆ ಬೇರೆ. ಅವರು ಇಂದ್ರಿಯಗಳ ಬದುಕಿನ ಹಿಂದೆ ಧಾವಿಸುತ್ತಾರೆ. ಈ ಧಾವಂತ ಅವರನ್ನು ಬಲಿಷ್ಠವಾದ ಮೃತ್ಯುಪಾಶಕ್ಕೆ ಸಿಲುಕಿಸುತ್ತದೆ. ಎಲ್ಲರ ನೆನಪಿನಲ್ಲಿಯೂ ಇರಬೇಕಾದ ಒಂದೇ ಒಂದು ವಾಸ್ತವ ಸಂಗತಿಯೆಂದರೆ ಆತ್ಮದ ಇರವು. ಆತ್ಮ ಮಾತ್ರ ವಾಸ್ತವ ಸಂಗತಿ. ಆತ್ಮದಿಂದಾಗಿ ರೂಪ ರಸ ಗಂಧ ಶಬ್ದ ಸ್ಪರ್ಶ ಮತ್ತು ಮೈಥುನಗಳ ಅರಿವು ನಮಗೆ ಆಗುತ್ತದೆ. ದೇಹದಿಂದ ಆತ್ಮವು ಹೊರಬಿದ್ದ ಮೇಲೆ ಈ ಯಾವ ಸುಖಾನುಭವವೂ ಇಂದ್ರಿಯಗಳಿಗೆ ಆಗಲಾರದು. ಸೂರ್ಯಾಸ್ತ-ಸೂರ್ಯೋದಯಗಳು, ಆತ್ಮ ಹಾಗೂ ದೇವತೆಗಳೂ ಸಹ ಪರಮಾತ್ಮನಲ್ಲಿಯೇ ಅಡಕವಾಗಿವೆ. ಪರಮಾತ್ಮನು ವಿಶ್ವಾತ್ಮ, ಅವನನ್ನು ಮೀರಿದ್ದು ಏನೂ ಇಲ್ಲ. ಅವನಿಗಿಂತ ಭಿನ್ನವಾದ ಸ್ವತಂತ್ರ ಜೀವಾತ್ಮನಿಲ್ಲ. ಈ ಲೋಕದಲ್ಲಿ ಅನೇಕ ತತ್ವಗಳನ್ನು ಕಾಣುವವನು ಮೃತ್ಯುವಿನಿಂದ ಮೃತ್ಯುವಿಗೆ ಸಾಗುತ್ತಾನೆ. ಪರ್ವತದ ತುದಿಯಲ್ಲಿ ಸುರಿದ ಮಳೆ ಅನೇಕಧಾರೆಯಾಗಿ ಇಳಿಜಾರಿನಲ್ಲಿ ಓಡುವಂತೆ ಶರೀರದ ಅನೇಕತ್ವದಿಂದಾಗಿ ಆತ್ಮದ ಏಕತ್ವದಲ್ಲಿ ಅನೇಕತ್ವ ತೋರುತ್ತದೆ. ಆದ್ದರಿಂದ ಮೃತ್ಯುದೇವನು 'ಏಕತ್ವ'ವನ್ನೇ ಒಪ್ಪಿಕೊಳ್ಳಬೇಕೆಂದು ಆಗ್ರಹಿಸುತ್ತಾನೆ :

**''ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ**
**ತಾದೃಗೇವ ಭವಿಷ್ಯತಿ,**
**ಏವಂ ಮುನೇಃ ವಿಜಾನತಃ ಆತ್ಮಾ-**
**ಭವತಿ ಗೌತಮ.''** – *(ಕಠೋಪನಿಷತ್ತು)*

''ನಚಿಕೇತನೇ, ಶುದ್ಧವಾದ ನೀರಿಗೆ ಸುರಿದ ಶುದ್ಧ ನೀರು ಅದೇ ಆಗುವಂತೆ ಜ್ಞಾನಿಯ ಆತ್ಮವೂ ಪರಮಾತ್ಮನೇ ಆಗುತ್ತದೆ.''

* * *

ಹೀಗೆ, ಕಠದ ವಿಷಯವು 'ಏಕತ್ವ'ದ ಮತ್ತು ಅದರ ಶ್ರೇಷ್ಠತೆಯ ಪ್ರತಿಪಾದನೆಯಾದರೂ ಕೂಡ, ಈ ಋಷಿಯ ಮುಂದಿನ ಯೋಚನೆಯು ಅನುಭಾವಿಯ ಲಹರಿಯಲ್ಲಿ ಮುಂದುವರಿಯುತ್ತದೆ.

ಋಷಿಯ ಆಧ್ಯಾತ್ಮಿಕ ಅನುಭವದಂತೆ ಆತ್ಮದ ಸ್ವಭಾವ ಋಜುವಾದುದು.

ಆತ್ಮದ ಶರೀರ ಹನ್ನೊಂದು ಬಾಗಿಲುಗಳಿರುವ ನಗರಕ್ಕೆ ಹೋಲುತ್ತದೆ. ಇದನ್ನು ಕಾಣುವವನ ಶೋಕ ದೂರವಾಗುತ್ತದೆ. ಜೀವಾತ್ಮವು ಪವಿತ್ರವಾದುದರಲ್ಲಿ ಮಾತ್ರ ರಮಿಸುವಂತಹುದು. ಮನುಷ್ಯಯೋನಿಯಲ್ಲಿ ಬಂದು ಜ್ಞಾನಿಗಳ ಸಂಗವನ್ನು ಬಯಸುತ್ತ ಯಜ್ಞವೇದಿಯಾಗುತ್ತ ಯಜ್ಞಮಾಡುತ್ತ ಅನೇಕ ಶರೀರಗಳಲ್ಲಿ ಅಲೆದಾಡುವ ಅತಿಥಿ ಆತ್ಮ. ಆತ್ಮವೆಂಬ ಈ ಮಹಾನ್ ಸತ್ಯವು ಕರ್ಮವಶದಿಂದ ಬೇರೆ ಬೇರೆ ಶರೀರಗಳಲ್ಲಿ ಕಾಣಿಸಿಕೊಳ್ಳುತ್ತದೆ.

ವಾಮನಾಕಾರದಲ್ಲಿ ನಡುವೆ ಅಡಕವಾಗಿರುವ ಆತ್ಮದ ಸೇವೆಯಲ್ಲಿ ಎಲ್ಲ ಇಂದ್ರಿಯಗಳೂ ತೊಡಗಿರುತ್ತವೆ. ಮರ್ತ್ಯರು ಜೀವಿಸಿರುವುದು ಪ್ರಾಣಾಪಾನಾದಿಗಳಿಂದ ಅಲ್ಲ, ಆತ್ಮದ ದೆಸೆಯಿಂದ.

ಕರ್ಮಸಿದ್ಧಾಂತವನ್ನು ಪ್ರತಿಪಾದಿಸುವ ಕಠೋಪನಿಷತ್ತು ಆತ್ಮದ ಶರೀರ ಧರ್ಮವನ್ನು ಹೀಗೆ ವಿವರಿಸುತ್ತದೆ: ಅಗ್ನಿಯು ಪ್ರತಿಯೊಂದು ವಸ್ತುವಿನ ಒಳಗೂ ಹೊಕ್ಕು ಅದಕ್ಕೆ ತಕ್ಕ ರೂಪ ಪಡೆಯುವಂತೆ, ಗಾಳಿ ಎಲ್ಲ ಕಡೆಗೂ ಹೊಕ್ಕು ಅದಕ್ಕೆ ತಕ್ಕ ರೂಪ ಪಡೆಯುವಂತೆ, ಒಬ್ಬನೇ ಪರಮಾತ್ಮ ಬೇರೆ ಬೇರೆ ದೇಹವನ್ನು ಹೊಕ್ಕು ಅದಕ್ಕೆ ತಕ್ಕ ಜೀವಾತ್ಮನಾಗುತ್ತಾನೆ. ಆದರೆ ಪರಮಾತ್ಮನು ಈ ಎಲ್ಲ ಶರೀರಗಳಿಂದ, ಕರ್ಮವಶವಾದ ಜನ್ಮಗಳಿಂದ, ಹೊರಗೂ ಅಸ್ತಿತ್ವವುಳ್ಳವನು.

ಋಗ್ವೇದದ ಪುರುಷಸೂಕ್ತದಲ್ಲಿ ವಿರಾಟ್ ಪುರುಷನನ್ನು "ಅತ್ಯತಿಷ್ಠತ್ ದಶಾಂಗುಲಂ" ಎಂದು ವರ್ಣಿಸಲಾಗಿದೆ. ಇದು ಋಗ್ವೇದದ ಆರ್ಯರು ತಮ್ಮ ಅಚ್ಚರಿಯನ್ನು ಹೇಳಿಕೊಂಡ ರೀತಿ. ಪರಮಾತ್ಮನು ತನ್ನ ಸೃಷ್ಟಿಯನ್ನೂ ಮೀರಿ ನಿಂತವನು ಎನ್ನುವ ಆರ್ಯರ ಈ ಉದ್ಗಾರಕ್ಕೆ ಪ್ರಚೋದನೆ ಏನೂ ಇರಲಿಲ್ಲ. ಅದಕ್ಕೆ ಬರಿ ಬೆರಗು ಕಾರಣವಾಗಿತ್ತು. ಆದರೆ ಅದೇ ಮನೋಜ್ಞವಾದ ಪ್ರತಿಮೆಯನ್ನು ಬಳಸುವ ಕಠದ ಋಷಿಗೆ ಅದೊಂದು ಅಪೂರ್ವ ಆಧ್ಯಾತ್ಮಿಕ ಅನುಭೂತಿಯಾಗುತ್ತದೆ.

*　　　　*　　　　*

ಕಠೋಪನಿಷತ್ತಿನ ಧೋರಣೆ ಬಹಳ ನಿಷ್ಠುರವಾದದ್ದು ಮತ್ತು ಒತ್ತಾಯಪೂರ್ವಕವಾಗಿ ಒಪ್ಪಿಕೊಳ್ಳುವಂತೆ ಮಾಡುವಂತಹುದು. ಇದಕ್ಕೆ ದೃಷ್ಟಾಂತ ಇದರ ಎರಡನೆಯ ಅಧ್ಯಾಯದ ಮೂರನೆಯ ವಲ್ಲಿಯಲ್ಲಿ ಸಿಗುತ್ತದೆ. ಇಲ್ಲಿ ಕಠವು ಪುರಾಣವನ್ನು ಸೃಷ್ಟಿಸತೊಡಗುತ್ತದೆ. ಇದರ ಗುರಿ ಪರಲೋಕದ ಕಲ್ಪನೆಯನ್ನು ಪ್ರಾಮಾಣಿಕಗೊಳಿಸುವುದು. ಇಲ್ಲಿಯ ಋಷಿಗೆ

ಪಾರಮಾರ್ಥಿಕ ತತ್ವಜ್ಞಾನದ ಜೊತೆಗೆ ಪರಲೋಕಗಳ ಕಲ್ಪನೆ ಕೂಡ ಅಗತ್ಯವೆನಿಸಿದ್ದೇಕೆ? ಅಥವಾ ಎಲ್ಲವೂ ಅವಾಸ್ತವಿಕ ಎನ್ನುವ ಕಾರಣಕ್ಕಾಗಿ ಮತ್ತೊಂದು ಕಲ್ಪನೆಯನ್ನು ಮಾಡಲಾಯಿತೇ ?

ಕಠೋಪನಿಷತ್ತಿನ ಈ ನಿಲುವು ಹೀಗಿದೆ: ಈ ಪ್ರಪಂಚವೊಂದು ಅಶ್ವತ್ಥವೃಕ್ಷ. ಬೇರು ಮೇಲ್ಮುಖವಾಗಿ ಕೊಂಬೆಗಳು ಅಧೋಮುಖವಾಗಿರುವ ಈ ವೃಕ್ಷ ಪ್ರವಾಹದಂತೆ ಅಖಂಡವಾಗಿದೆ. ಇದು ಸನಾತನ ಮರ. ಅಮೃತನಾದ ಪರಮಾತ್ಮ ಇದರ ಬೇರು; ಇಡೀ ಪ್ರಪಂಚದ ಪರಿವರ್ತನೆ-ಅನುವರ್ತನೆಗಳಿಗೆ ಇದೇ ಮೂಲ. ದುಷ್ಟನ ಮೇಲೆ ಎತ್ತಿದ ಶಸ್ತ್ರದಂತೆ ಪರಮಾತ್ಮನು ಭಯಂಕರನಾಗಿದ್ದಾನೆ. ಇದನ್ನು ಧೀರರು ಅರಸಿ ಕಂಡಿದ್ದಾರೆ, ಕಂಡು ಅಮೃತತ್ವಕ್ಕೆ ತಲುಪಿದ್ದಾರೆ. ಅವನ ಭಯದಿಂದ ಅಗ್ನಿ ಸುಡುತ್ತದೆ; ಅವನ ಭಯದಿಂದ ಸೂರ್ಯ ಬೆಳಗುತ್ತಾನೆ; ಅವನ ಭಯದಿಂದ ಇಂದ್ರಾದಿ ದೇವತೆಗಳೂ ಕ್ರಿಯಾವಂತರಾಗಿದ್ದಾರೆ; ಸಾವು ಅವನ ನಿಯಂತ್ರಣದಲ್ಲಿದೆ.

ಕನ್ನಡಿಯಲ್ಲಿ ಸರಿಯಾಗಿ ಮುಖ ಗೋಚರಿಸುವಂತೆ ಶುದ್ಧ ಬುದ್ಧಿ ಹಾಗೂ ನಿರ್ಮಲ ಮನಸ್ಸಿನಲ್ಲಿ ಪರಮಾತ್ಮನು ಸರಿಯಾಗಿ ಗೋಚರಿಸುವನು. ಪಿತೃಲೋಕದಲ್ಲಿ ಅವನ ರೂಪ ಬೇರೆ. ಅಲ್ಲಿ ಅವನು ಕನಸಿನ ವ್ಯಕ್ತಿಯಂತೆ ಭಿನ್ನನಾಗಿ ತೋರುತ್ತಾನೆ. ಕನ್ನಡಿಯಲ್ಲಿ ಕಾಣಬಹುದಾದ ನಮ್ಮ ಅಂಗಾಂಗಗಳನ್ನು ನೀರಿನಲ್ಲಿಯೂ ನೋಡಬಹುದಲ್ಲವೇ. ನೀರಿನಲ್ಲಿ ಎಲ್ಲ ದಿಕ್ಕಿನಿಂದ ನೋಡಬಹುದಾದರೂ ಕನ್ನಡಿಯಲ್ಲಿನಂತೆ ಕಾಣದು. ಹೀಗೆ ಪರಮಾತ್ಮನೂ ಸಹ ಗಂಧರ್ವಲೋಕದಲ್ಲಿ ತುಸು ಮಾತ್ರ ಗೋಚರಿಸುತ್ತಾನೆ. ಆದರೆ ಬ್ರಹ್ಮಲೋಕದಲ್ಲಿ ಆತ್ಮ ಮತ್ತು ಪರಮಾತ್ಮನ ದರ್ಶನ ನೆರಳು-ಬೆಳಕಿನಂತೆ ತೋರುತ್ತದೆ.

ಕಠೋಪನಿಷತ್ತಿನ ಈ ನಿರೂಪಣೆ ಪುರಾಣಗಳ ಪರಿಭಾಷೆಯಲ್ಲಿದೆ. ತನ್ನ ತಾತ್ವಿಕ ಚಿಂತನೆಯ ವಲಯದಲ್ಲಿ ಇದನ್ನೆಲ್ಲ ಸೇರಿಸಿಕೊಳ್ಳುವುದು ಕಠದ ಹೊಸ ಕ್ರಮ. ಈ ನಡುವೆ ತಟ್ಟನೆ ಗಮನವನ್ನು ಬದಲಿಸುವ ಋಷಿ ಹೀಗೆ ಹೇಳತೊಡಗುತ್ತಾನೆ :

ಜ್ಞಾನೇಂದ್ರಿಯಗಳೆಲ್ಲ ಮನದ ಜೊತೆಗೆ ನಿಂತಾಗ, ನಿಲ್ಲುವ ತನ್ಮಯತೆ ಸಾಧ್ಯವಾದಾಗ, ಬುದ್ಧಿ ಚಂಚಲಗೊಳ್ಳದೆ ಆತ್ಮದಲ್ಲಿ ನೆಲೆಸಿ ಅದೊಂದು ಸ್ಥಿರವಾದ ಆಧ್ಯಾತ್ಮಿಕ ಸ್ಥಿತಿ ಎನ್ನಿಸಿಕೊಳ್ಳುತ್ತದೆ. ಸೋಜಿಗದ ವಿಷಯವೆಂದರೆ ಕಠದ ಪ್ರಕಾರ ಆಧ್ಯಾತ್ಮಿಕತೆಯನ್ನು ನಂಬುಗೆಯಿಂದ ಮಾತ್ರ ಆವಾಹಿಸಿಕೊಳ್ಳಬೇಕಾಗುತ್ತದೆ. ಈ ಆವಾಹನೆಯ ಕ್ರಮವನ್ನು ಕಠ ಹೀಗೆ

ವಿವರಿಸುತ್ತದೆ: ''ಪರಮಾತ್ಮನಿದ್ದಾನೆ'' ಎನ್ನುವವನಿಂದಲ್ಲದೆ ಬೇರೆ ಯಾವ ಮೂಲದಿಂದಲೂ ಅವನನ್ನು ಅರಿಯಲು ಸಾಧ್ಯವಿಲ್ಲ. ''ಇದ್ದಾನೆ'' ಹಾಗೂ ''ಇಲ್ಲ'' – ಈ ಎರಡರ ನಡುವೆ ''ಇದ್ದಾನೆ'' ಎನ್ನುವುದರಲ್ಲೆ ನಂಬುಗೆಯಿಡಬೇಕು. ಏಕೆಂದರೆ ''ಅಸ್ತಿ'' – ''ಇದ್ದಾನೆ'' – ಎನ್ನುವವನ, ಎಂದು ನಂಬಿದವನ, ತತ್ವಜ್ಞಾನವು ಫಲಿಸುತ್ತದೆ. ಅಂಗುಷ್ಠದಷ್ಟು ಇರುವ ಅಂತರಾತ್ಮನು ಸದಾ ಜೀವಿಗಳ ಹೃದಯದಲ್ಲಿ ಇರುತ್ತಾನೆ. ಹುಲ್ಲಿನೊಳಗಿನ ಸಪುರವಾದ ಎಳೆಯನ್ನು ಹೊರತೆಗೆಯುವಂತೆ ಅಂತರಾತ್ಮನನ್ನು ಶರೀರದಿಂದ ಬೇರ್ಪಡಿಸಿ ಅರಿಯಬೇಕು.

*　　　*　　　*

ಹೀಗೆ ಕಠೋಪನಿಷತ್ತಿನಲ್ಲಿ ಇಷ್ಟು ಸಮಯ ತೊಡಗಿಕೊಂಡ ಮೇಲೆ, ಓದಿನ ಫಲವನ್ನು ಆಯ್ದುಕೊಳ್ಳುವುದು ನನಗೆ ಇಷ್ಟವಾದ ಕೆಲಸ.

ಕಠದ ಕೊನೆಯಲ್ಲಿ ನೆನಪಿನಲ್ಲಿ ನಿಲ್ಲುವ ಒಂದು ಮಾತು ಹೀಗಿದೆ: ''ಅನ್ಯೋ ಅಪಿ ಏವಂ ಯೋ ವಿದಧ್ಯಾತ್ಮಮೇವ.'' ಇತ್ಯಾದಿ (ಕಠೋಪನಿಷತ್ತು) – ಅಂದರೆ, ''ಹೀಗೆ ಮೃತ್ಯು ಹೇಳಿದ ಆತ್ಮ ವಿದ್ಯೆಯನ್ನು ಯೋಗವಿಧಿಯೊಡನೆ ತಿಳಿದ ನಚಿಕೇತನು ರಾಗಾದಿಗಳಿಂದ ಮುಕ್ತನಾಗಿ ಮೃತ್ಯುವಿನ ಭೀತಿಯಿಂದ ಬಿಡಿಸಿಕೊಂಡು ಬ್ರಹ್ಮಸಾಕ್ಷಾತ್ಕಾರ ಪಡೆದನು. ಅಧ್ಯಾತ್ಮವಿದ್ಯೆಯನ್ನು ಇದೇ ರೀತಿ ಅರಿತವನು ಬ್ರಹ್ಮ ಸಾಕ್ಷಾತ್ಕಾರಕ್ಕೆ ತಕ್ಕವನಾಗುತ್ತಾನೆ'' – ಇದು ಮೂಲತಃ ಪುರಾಣಗಳಲ್ಲಿ ಮಾತ್ರ ಕಾಣುವ ಫಲಶ್ರುತಿಯ ವಾಕ್ಯ. ಉಪನಿಷತ್ತುಗಳ ಸಾಹಿತ್ಯದಲ್ಲಿ ಯಾವ ಮುಕ್ತಾಯವೂ ಇಷ್ಟು ಕಾಂತಿಹೀನವಾಗಿಲ್ಲ. ಆರುಣಿಯ ಯಾಗವನ್ನು ಪ್ರಸ್ತಾಪಮಾಡುತ್ತ ಅಲ್ಲಿಂದ ಬ್ರಹ್ಮಸಾಕ್ಷಾತ್ಕಾರವನ್ನು ನಿಗದಿಪಡಿಸುವವರೆಗೆ ಕಠ ಬೆಳೆದು ನಿಲ್ಲುತ್ತದೆ. ಇಲ್ಲಿನ ಅಧ್ಯಾತ್ಮ ಚಿಂತನೆಯನ್ನು ಯಾವ ಹಂತದಲ್ಲಿಯೂ ಮಾನವಹಿತವನ್ನು ಬಯಸುವ ಗಾಢಸ್ಥಿತಿಯೆಂದಾಗಲೀ ಮನುಷ್ಯಗಳಿಸಲೇಬೇಕಾದ ಒಂದು ಅನಿವಾರ್ಯ ಧರ್ಮವೆಂದಾಗಲೀ ಒಪ್ಪಿಕೊಳ್ಳುವಂತಿಲ್ಲ. ಹೀಗೆ ಏಕಕಾಲದಲ್ಲಿ ಕಠೋಪನಿಷತ್ತು ಆಧ್ಯಾತ್ಮಿಕ ತತ್ವಜ್ಞಾನವನ್ನು ವಿವರಿಸುವ ಹಾಗೂ ಅನಗತ್ಯಗೊಳಿಸುವ ಹೊಣೆಯನ್ನು ವಹಿಸಿಕೊಳ್ಳುತ್ತದೆ.

ಆದರೆ ಹಿಂದೂ ಮನಸ್ಸಿನೆದುರು ಆಧ್ಯಾತ್ಮಿಕತೆಯ ಹೊಸ ಪ್ರಸ್ತಾಪ – ಒಡಂಬಡಿಕೆಗಳೊಡನೆ ಬಂದು ನಿಲ್ಲುವ ಕಠೋಪನಿಷತ್ತು ಅಂತಿಂಥ ಉಪನಿಷತ್ತಲ್ಲ. ನಮ್ಮ ಬದುಕು ಆಧ್ಯಾತ್ಮಿಕ ಪ್ರೇರಣೆಯದೋ ಅಥವಾ ಭೌತಿಕ

ಪ್ರೇರಣೆಯದೋ ಎಂಬ ಎರಡು ಸ್ಪಷ್ಟ ಪ್ರಶ್ನೆಗಳನ್ನೆತ್ತಿ ಆಯ್ಕೆಗೆ ಆಗ್ರಹಮಾಡುವ ಕಠವನ್ನು ಆಗ ಗಂಭೀರವಾಗಿಯೇ ತೆಗೆದುಕೊಳ್ಳಬೇಕಾಗಿ ಬಂದಿದ್ದಿರಬೇಕು. ಬದುಕು ಆಧ್ಯಾತ್ಮಿಕವಾದುದು ಎಂದೇ ತೋರಿದಾಗ ಅದು ಕಠ ಸೂಚಿಸುವ ಅದ್ವೈತವೊಂದೇ ಎಂದು ನಂಬಬೇಕಾಗುತ್ತದೆ. ಆದರೆ ಆಧ್ಯಾತ್ಮಿಕತೆಯು ಮಾನವಸ್ವಭಾವದ ಪರಿಪಕ್ವ ಸ್ಥಿತಿಯೇ ?

ಕಠೋಪನಿಷತ್ತಿನ ಇಡೀ ಕಾಳಜಿಯ ಬಗ್ಗೆ ಸಂದೇಹವುಂಟಾಗಿರುವುದ ರಿಂದ ಈ ಪ್ರಶ್ನೆಯನ್ನು ಎತ್ತಬೇಕಾಗಿದೆ. ಆದರೆ ಈ ಪ್ರಶ್ನೆಗಿಂತ, ಕಠೋಪನಿಷತ್ತಿನ ಚಿಂತನೆಯಲ್ಲಿ ಯಾವುದು ಸಾಚಾ ಯಾವುದು ಮೋಸ ಎಂದು ಅರಸುವುದಕ್ಕಿಂತ ಅಥವಾ ಇದು ಬರಿಯ ಕಲ್ಪನಾವಿಲಾಸ ಎನ್ನುವ ವಕ್ರಮಾತಿನ ವಿಮರ್ಶೆಗಿಂತ, ಇಲ್ಲಿ ಹೆಚ್ಚು ಗಮನಾರ್ಹವೆನ್ನಿಸುವುದು ಮನುಷ್ಯನ ಬಗ್ಗೆ ಇಲ್ಲಿರುವ ತಾತ್ಸಾರ, ನಕ್ಷತ್ರಲೋಕ ಹಾಗೂ ಮಣ್ಣಿನ ಋಣಗಳ ಸೆಳೆತಕ್ಕೆ ಸಿಕ್ಕಿದ ಮನುಷ್ಯನ ಅಸುಖದ ಬಗೆಗಿನ ನಿರಾಸಕ್ತಿ. ಹೀಗೆ ಕಠದ ಕಾಳಜಿಯು ವ್ಯರ್ಥತೆಯ ಧ್ಯಾನ ಮಾತ್ರ ಆಗಿರುವುದರಿಂದ ಇದರ ಆಧ್ಯಾತ್ಮಿಕ ಅನುಭವವು ಆತ್ಮಪರೀಕ್ಷೆಯ ಹಂಗನ್ನೂ ತನ್ನ ಅಂತಃಕರಣವನ್ನು ಕೇಳಿಕೊಳ್ಳುವ ಹೊಣೆಯನ್ನೂ ಕಳೆದುಕೊಳ್ಳುತ್ತದೆ. ಚಿಂತನೆಯ ಕೇಂದ್ರ ಬಿಂದುವನ್ನು ತಲುಪಿ ಅದರ ಪ್ರಖರ ಬೆಳಕಿನಲ್ಲಿ ಸಾಧಕನ ಅಂತರಂಗವನ್ನು ಬೆಳಗಬಹುದಾದ ಉತ್ಕಟ ಕ್ಷಣಗಳು ಕೈಗೂಡದಿರಲೂ ಇದೇ ಕಾರಣ. ಆಧ್ಯಾತ್ಮಿಕ ಫಲಕ್ಕೆ ಕೈಹಿಡಿದು ನಡೆಸುವ ದಾರಿಯು ಶಬ್ದಮಯ ಪುನರುಕ್ತಿಗಳಲ್ಲಿ ಅನಾವರಣ ಗೊಳ್ಳಲಾರದು. ಅಂತಹ ದಾರಿ ದೈಹಿಕತೆಯ ಮೂಲವುಳ್ಳ ಅಗತ್ಯಗಳನ್ನು ಸಂಸ್ಕರಿಸುವ ನೈತಿಕ ರೂಪದ್ದು. ಕಠ ಈ ನಿಜದ ಹತ್ತಿರಕ್ಕೂ ಬರಲಾಗದೆ ಸೋಲುತ್ತದೆ. ಇಂದ್ರಿಯಭೀತಿ, ಮೃತ್ಯುಭೀತಿ, ಕಲ್ಪಿತ ಬ್ರಹ್ಮಲೋಕ – ಪರಲೋಕಗಳ ಸುಖ, – ಇವೇ ಮೊದಲಾದವು ಕೂಡಿದಾಗ ಮನುಷ್ಯ ತೋರುವ ಅಸಹಾಯಕತೆ ಇಲ್ಲಿದೆ.

ಕಠದ ಋಷಿ ಬದುಕನ್ನು ಕಲಿಯಲೊಲ್ಲದ ಕವಿ, ಶಿಷ್ಟ, ನಿಯಂತ್ರಿತ ಹಾಗೂ, ಎಚ್ಚರಿಕೆಯುಳ್ಳ ಶೈಲಿಯಿದ್ದೂ ಕವಿಪ್ರತಿಭೆಯನ್ನು ಪುನರುಕ್ತಿಗಾಗಿ ಬಳಸಿಕೊಳ್ಳುವ ಕಾರಣ ಸೂಕ್ಷ್ಮವಾಗಿ ಕವಿಶೀಲಕ್ಕೆ ವಿಮುಖನಾದವನು. ಆದ್ದರಿಂದ ಈತ ಬದುಕಿನ ಉಲ್ಲಾಸವನ್ನು ಅರಸಬಲ್ಲವನಲ್ಲ; ರಸಿಕನಲ್ಲ. ರಸಿಕನಲ್ಲದ ಕಾರಣ ಬಾಳಿನಲ್ಲಿ ನೈತಿಕತೆಯ ಸಮನ್ವಯದ ಹಂಗಿಲ್ಲದವನು. ದಿನನಿತ್ಯದ ಪರದಾಟದಲ್ಲಿ ಅರ್ಥಕಾಣದೆ ಮನುಷ್ಯನ ಜಟಿಲವಾದ ವೈಯುಕ್ತಿಕ ಹಾಗೂ ಸಾಮಾಜಿಕ ಸಂಬಂಧದ ಹೊಣೆಯನ್ನು ಸರಳೀಕರಿಸುವ, ಆ ಮೂಲಕ

ಬದುಕಿನ ತುದಿ ಮುಟ್ಟುವ ಏಕಾಗ್ರತೆಗೆ ಭಂಗ ತರುವ ಈ ಋಷಿ ವಕ್ರಮಾತಿನ ಪರಮಹಂಸ. ಆದುದರಿಂದ ಈತ ಮನುಷ್ಯನ ಅಖಂಡ ಸಾಮಾಜಿಕತೆಗೇ ಪೂರ್ವಪಕ್ಷವಾಗುತ್ತಾನೆ.

* * *

ಕಠೋಪನಿಷತ್ತಿನ ಆಧ್ಯಾತ್ಮಿಕ ವಿನ್ಯಾಸವು ಮುಂದೆ ಹಿಂದೂ ಧರ್ಮದ ಬೌದ್ಧಿಕ ಕ್ರಿಯೆಯ ಮುಖ್ಯ ಅಂಗವಾಗುವ ಕಾರಣ ಒಂದು ಹೊಸ ಭೂಮಿಕೆಯಾಗುತ್ತದೆ. ಇದರ ಸನ್ನಾಹ ಈಶಾವಾಸ್ಯ ಉಪನಿಷತ್ತಿನದಕ್ಕಿಂತ ಪೂರ್ತಿ ಬೇರೆ ರೀತಿಯದು. ಈಶಾವಾಸ್ಯದ ಕೊನೆಯಲ್ಲಿ ಕಾಣುವ ಕೃತಾರ್ಥ ಭಾವವನ್ನು ಕಠ ಸಾಧಿಸಲಾಗುವುದಿಲ್ಲ. ಆದರೂ ಮನುಷ್ಯ ಪ್ರಕೃತಿಯ ರಚನೆಯನ್ನು ತಾತ್ವಿಕವಾಗಿ ಅಸಿಂಧುಗೊಳಿಸುವ ಈ ಉಪನಿಷತ್ತು ಮುಂದೆ ಭಗವದ್ಗೀತೆಯಲ್ಲಿ ಪರಿಪೂರ್ಣಾವತಾರಿಯಾಗುತ್ತದೆ. ಇಂತಹ ಹಿನ್ನೆಲೆ ಮತ್ತು ಸ್ವರೂಪವಿರುವ ಕಾರಣ ಕಠವನ್ನು ಒಪ್ಪುವ ಹಿಂದೂ ಪರಂಪರೆಯು ಇದರ ವಿಚಾರಧಾರೆಯನ್ನು ''ಕತ್ತಲೆಯಲ್ಲಿ ಬೆಳಕಿನ ಕಿಡಿ'' ಎಂದು ವರ್ಣಿಸುತ್ತದೆ.

ಆಧ್ಯಾತ್ಮಿಕ ತತ್ವಶಾಸ್ತ್ರದ ಉಗಮದ ಖಚಿತ ದಾಖಲೆಗಳು ಕಠದಲ್ಲಿ ಇರುವ ಕಾರಣ ಇದನ್ನು ಕುತೂಹಲದ ಮನಸ್ಸಿನಿಂದ ಪ್ರವೇಶಮಾಡಿ ಇಡೀ ಚಿಂತನೆಯನ್ನು ಪ್ರಾಮಾಣಿಕ ಮನಸ್ಸಿನಿಂದ ಕೂಡಿದ್ದೆಂದು ಭಾವಿಸಲು ಇದರ ಮೂಲದಲ್ಲಿ ತೋರುವ ಸಾವಿನ ಭಯವು ಅಡ್ಡಿಯಾಗುತ್ತದೆ. ನಚಿಕೇತ ಹೇಳುವಂತೆ ''ಜೀವಿಷ್ಯಾಮೋ ಯಾವತ್ ಈಶಿಷ್ಯಸಿ ತ್ವಮ್'' (ಕಠ) ಅಂದರೆ ''ಮೃತ್ಯು ಬಯಸುವವರೆಗೆ ಬದುಕಿರಬಲ್ಲ ಮನುಷ್ಯ'' ಯಾವಾಗಲೂ ಸಾವಿನ ಆಸರೆಯಲ್ಲಿ ಇರುವವನು. ಇದು ಬದುಕಿನ ಬಗ್ಗೆ ಕಠ ಯೋಚಿಸುವ ಕ್ರಮ. ಇದು ಕಠದ ಹತಾಶೆಯ ಅಧ್ಯಾತ್ಮ. ಆಧ್ಯಾತ್ಮಕತೆಯು ಮನುಷ್ಯ ಸ್ವಭಾವದ ಮುಖ್ಯ ಸೆಳೆತವಲ್ಲದ್ದರಿಂದ ಕಠದ ಋಷಿಯ ಮೇಲಿರುವ ಆಧ್ಯಾತ್ಮಿಕ ಒತ್ತಡಕ್ಕೆ ಸಹಜವಾದ ಸಮರ್ಥನೆಯೂ ಇಲ್ಲ.

ರಚನಾತ್ಮಕವಾಗಿ ಬದುಕಿ ಈಶಾವಾಸ್ಯದ ನೈತಿಕತೆಯನ್ನೂ ಕೇನದ ಅಭಿರುಚಿಯನ್ನೂ ಅಳವಡಿಸಿಕೊಳ್ಳಲು ವಿಫಲರಾದ ಆರ್ಯರಿಗೆ ಕಠೋಪ ನಿಷತ್ತಿನ ಆಧ್ಯಾತ್ಮಿಕತೆಯ ಮೋಹವೇ ಮನುಷ್ಯನ ಬುದ್ಧಿಯ ಪರಮ ಗಮ್ಯವೆಂದು ತೋರಿರಬೇಕು. ಅದನ್ನು ನಿಬ್ಬೆರಗಿನಲ್ಲಿ ಆರಾಧಿಸುವಾಗ ಆ ಮನಸ್ಥಿತಿಯೊಂದೇ ನಿಜವಾಗಿ ಸಾಧಿಸಬೇಕಾದ ಸಂಗತಿಯೆನ್ನಿಸಿರಬೇಕು. ಕಠದ

ಪ್ರಭಾವದಿಂದ ಶಿಷ್ಟ ಸಮಾಜದ ಆರ್ಯರ ಸಂಸ್ಕೃತಿಯು ಪರಂಪರೆಯ ಹಿಂಬಾಲವಾಯಿತು; ಹೊಸತನದ ಹುಡುಕಾಟಕ್ಕೆ ಇಲ್ಲಿ ಆದ್ಯತೆ ಸಿಗದಾಯಿತು. ಇದರಿಂದ ಅವರಿಗೆ ದಕ್ಕಿದ್ದೆಂದರೆ ತರ್ಕಶೀಲವಾದ ವಿದ್ಯೆ ಮತ್ತು ಶಾಸ್ತ್ರಗಳು ಮಾತ್ರ. ನ್ಯಾಯಶಾಸ್ತ್ರ, ವೇದಾಂತಗಳು ಇದರಿಂದ ಏಕಮುಖವಾಗಿ ಬೆಳೆಯಲು ಪ್ರಚೋದನೆ ಸಿಕ್ಕಿತು. ಲೌಕಿಕ ಬದುಕೊಂದೇ ಅಲ್ಲ, ನೈತಿಕ ಕ್ರಿಯೆ ಕೂಡ ಸಂಗವೆಂದು ಕಂಡಿದ್ದರಿಂದ ನಿವೃತ್ತಿಪರವಾದ ಆಧ್ಯಾತ್ಮಿಕ ಶಾಸ್ತ್ರ ವಿಸ್ತರಿಸಿತು. ಎಲ್ಲ ಶಾಸ್ತ್ರಗಳ ಘೋಷಣೆಯೂ ಒಂದೇ ಆಯಿತು. ಅದೇ 'ನಿಶ್ರೇಯಸಾಧಿಗಮಃ' ಅಂದರೆ 'ಮೋಕ್ಷದ ಪ್ರಾಪ್ತಿ.' ಹೀಗೆ, ಬದುಕುವ ಅನಿವಾರ್ಯತೆಯಿಲ್ಲದೆಯೇ ಬರೀ ಬೌದ್ಧಿಕ ಹಠದಲ್ಲಿ ಆಧ್ಯಾತ್ಮಿಕ ಚಿಂತನೆ ನಡೆದುದರಿಂದ ಬದುಕು ಅವಮಾನಿತವಾದದ್ದು ಯಾರ ಗಮನಕ್ಕೂ ಇತಿಹಾಸದಲ್ಲಿ ಬರದೇ ಹೋಯಿತು. ಇಂದಿನ ಶಿಷ್ಟ ಸಮಾಜದಲ್ಲಿ ಕೂಡ ಯಾವುದೇ ಚಿಂತನೆಯು ಅಧ್ಯಾತ್ಮವಾದದ ದಿಕ್ಕು ಹಿಡಿದು ಎಲ್ಲೋ ಒಂದು ಕಡೆ ಗರ ಬಡಿದು ನಿಲ್ಲುವುದನ್ನು ಕಾಣುತ್ತೇವೆ.

ಇಷ್ಟೇ ಮುಖ್ಯವಾದ ಇನ್ನೊಂದು ಸಂಗತಿಯೆಂದರೆ ಕಠದಲ್ಲಿ ಕಾಣುವ ಹಿಂಸೆಯ ಪ್ರವೃತ್ತಿ. ನಿಷ್ಠುರವಾದ ಆಧ್ಯಾತ್ಮಿಕ ವ್ಯಕ್ತಿತ್ವದಿಂದ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವ ಹಿಂಸೆ ಇಲ್ಲಿಯ ಲಹರಿಯಾಗಿದೆ. ಎಲ್ಲ ಇಂದ್ರಿಯಾರ್ಥಗಳನ್ನು ದಮನಗೊಳಿಸುತ್ತ ಬೌದ್ಧಿಕವಾಗಿ ಲೋಲುಪ ಜೀವನ ನಡೆಸುವ, ಹೊರಗಿನಿಂದ ಕಠೋರ ವ್ರತದಂತೆ ತೋರಿದರೂ ಅಂತರಂಗದಲ್ಲಿ ದಹಿಸುವ ಹಿಂಸೆ ಇದು. ಮನುಷ್ಯನ ಸ್ವಭಾವದ ಈ ಆಹುತಿಯು ಆಧ್ಯಾತ್ಮಿಕ ಸಾಧನೆಯಲ್ಲಿ ನಿರಂತರವಾಗಿ ಇರುವುದರಿಂದ ಅಲ್ಲಿರುವ ಹಠ ಸೂಕ್ಷ್ಮವಾಗಿ ಸಾಧಕನ ವ್ಯಕ್ತಿತ್ವದಲ್ಲಿ ದಾಖಲಾಗುತ್ತ ಹೋಗುತ್ತದೆ. ಈ ಹಿಂಸಾರುಚಿಯು ಆಧ್ಯಾತ್ಮಿಕ ವ್ಯಕ್ತಿಯ ಮಾನವೀಯ ಕರುಣವನ್ನು ಕೊಲ್ಲುವುದರಲ್ಲಿ ಯಶಸ್ವಿಯಾಗುತ್ತದೆ. ಲೋಕವನ್ನು ನೋಡಿಯೂ ನೋಡದಂತಿರುವ, ಸಮೂಹದಿಂದ ಬೇರ್ಪಡಿಸಿ ದೂರವಿಡುವ, ಈ ಧೋರಣೆಯನ್ನು 'ಯೋಗ'ವೆಂದು ಸಮರ್ಥಿಸುವ ಲಂಪಟತನದಿಂದಾಗಿ ಮನುಷ್ಯ ಒಂಟಿಯಾಗುತ್ತಾನೆ. ಇದರಿಂದ ಆಧ್ಯಾತ್ಮಿಕ ವ್ಯಕ್ತಿಯು ಸಮಾಜಕ್ಕಾಗಿ ರೂಢಿಸಿಕೊಳ್ಳುವುದು ಆತ್ಮಮರುಕದ ಸಂಬಂಧವೋ ದೈನ್ಯವೋ ಮತ್ತೇನೋ ಆಗುವುದು ಅನಿವಾರ್ಯ.

ಕಠದಲ್ಲಿ ಇದನ್ನು ಕಂಡಮೇಲೂ ವೈಯುಕ್ತಿಕವಾಗಿ ನನಗೆ ಬೆರಗು ಹುಟ್ಟಿಸಿದ ಒಂದು ವಿಷಯವನ್ನು ದಾಖಲೆ ಮಾಡದೆ ಇದನ್ನು ಮುಗಿಸಿದರೆ ತಪ್ಪಾದೀತು : ಕಠದ ಆಧ್ಯಾತ್ಮಿಕ ತತ್ವಜ್ಞಾನವು ಸಮುದಾಯದ ಋಣವನ್ನು

ಲೆಕ್ಕಕ್ಕೆ ತೆಗೆದುಕೊಳ್ಳದ ವ್ಯಕ್ತಿಯೊಬ್ಬನ ಖಾಸಗೀ ಗೀಳಿನಂತಿದೆ. ಆದರೂ ಇದು ಮುಂದೆ ಹಿಂದೂಧರ್ಮದ ಬೌದ್ಧಿಕ ದ್ರವ್ಯವಾಗಿ ಬೆಳೆದದ್ದು ಮಾತ್ರ ಅದ್ಭುತವೆನಿಸುತ್ತದೆ. ಇಲ್ಲಿಯ ಮಹತ್ವಾಕಾಂಕ್ಷೆ ಬರಿಯ ಆತ್ಮೋದ್ಧಾರಕ್ಕೆ ಸೀಮಿತವಾಗಿ ಉಳಿಯಲಿಲ್ಲ. ಇದು ಪ್ರತಿಯೊಬ್ಬನ ಯೋಚಿಸುವ ಕ್ರಿಯೆಗೆ ಹೊಸ ದಿಕ್ಕನ್ನು ತೋರಿಸುವ ಮುಖಾಂತರ ಸಾರ್ವಭೌಮ ಎಂದು ಗುರುತಿಸಿಕೊಂಡಿತು. ವೈದಿಕ ಧರ್ಮದ ಒಳವಲಯದಲ್ಲಿ ಸದ್ದಿಲ್ಲದೆ ನಡೆದುಹೋದ ಈ ಕ್ರಾಂತಿ ತನ್ನ ನಿಶ್ಯಬ್ದದಿಂದಲೇ ಸಹಜಕ್ರಿಯೆ ಎನ್ನಿಸಿಕೊಂಡಿತು.

# ಮುಂಡಕೋಪನಿಷತ್ತಿನಲ್ಲಿ ಹಕ್ಕಿಗಳ ಸಂಭ್ರಮ

ಅಥರ್ವವೇದಕ್ಕೆ ಸೇರಿದ ಮುಂಡಕೋಪನಿಷತ್ತನ್ನು ಬೇರೆ ಯಾವ ಉಪನಿಷತ್ತಿನ ಜೊತೆಗೂ ಹೋಲಿಸಿ ನೋಡಲು ಸಾಧ್ಯವಿಲ್ಲ. ಇಲ್ಲಿಯ ಪ್ರಸನ್ನವಾದ ಶೈಲಿಯಲ್ಲಿ, ಹೊಸ ಕಲ್ಪನೆಗಳಲ್ಲಿ ಮತ್ತು ಮನೋಹರವಾದ ಛಂದಸ್ಸುಗಳಲ್ಲಿ ನಿಜವಾದ ಕವಿಯೊಬ್ಬನ ಅಸಲು ಕಸುಬನ್ನು ಕಾಣುತ್ತೇವೆ. ಮುಂಡಕೋಪನಿಷತ್ತಿನಲ್ಲಿ ಅರವತ್ನಾಲ್ಕು ಮಂತ್ರಗಳಿವೆ. ಚೇತೋಹಾರಿಯಾದ ಈ ಮಂತ್ರಗಳು ಮೂರು ಮುಂಡಕಗಳ ಅಂದರೆ ಅಧ್ಯಾಯಗಳ ಆರು ಖಂಡಗಳಲ್ಲಿ ಹಂಚಿಹೋಗಿವೆ. ಈ ಉಪನಿಷತ್ತನ್ನು ಆಚಾರ್ಯನಾದ ಅಂಗಿರಸ್ಸು ಆ ಕಾಲದ ವಿಖ್ಯಾತ ಗೃಹಸ್ಥ ಶೌನಕನಿಗೆ ಬೋಧಿಸಿದ ಎಂದು ಉಪನಿಷತ್ತಿನ ಆರಂಭದಲ್ಲಿ ಹೇಳಲಾಗಿದೆ. ಭಾರತೀಯ ತತ್ವಜ್ಞಾನಿಗಳ ಘೋಷವಾಕ್ಯಗಳೆಂದು ಗುರುತಿಸಲಾದ ''ಪುರುಷ ಏವ ಇದಂ ವಿಶ್ವಂ'', ''ಬ್ರಹ್ಮೇವೇದಂ ವಿಶ್ವಮ್ ಇದಂ ವರಿಷ್ಠಂ'', ''ದ್ವಾಸುಪರ್ಣಾ'', ''ಸತ್ಯಮೇಯ ಜಯತೆ ನಾನೃತಂ'', ''ನಾಯಮಾತ್ಮಾ ಪ್ರವಚನೇನ ಲಭ್ಯಃ'' ಮೊದಲಾದವು ಈ ಉಪನಿಷತ್ತಿನವು. ಸಂಪ್ರದಾಯವು ನಂಬುವಂತೆ, ಮುಂಡಕದ ಗುರಿ ಬ್ರಹ್ಮಜ್ಞಾನವೆಂಬ ಪರಾವಿದ್ಯೆಯ ಬೋಧನೆ. ಬ್ರಹ್ಮಜ್ಞಾನಕ್ಕೆ ಹೊರತಾದ ವ್ಯಾವಹಾರಿಕ ಪ್ರಪಂಚದ ಎಲ್ಲ ಜ್ಞಾನವನ್ನೂ ಮುಂಡಕವು 'ಅಪರಾವಿದ್ಯೆ' ಎನ್ನುತ್ತದೆ. ''ಅಪರಾವಿದ್ಯೆ'ಯಿಂದ ತತ್ವಜ್ಞಾನವು ದೊರೆಯಲಾರದು. ಆದರೆ ಇದು ಪರಾವಿದ್ಯೆಯ ಜೊತೆಗೆ ಅಥವಾ ಒಂದೆರಡು ಹೆಜ್ಜೆ ಹಿಂದೆ ನಿಂತು ಅದರ ಊರುಗೋಲಾಗುತ್ತದೆ. ಪರಾವಿದ್ಯೆಗೆ ಸನ್ಯಾಸವು ಉಪಕಾರಿಯಾಗ ಬಹುದಾದರೂ ಸನ್ಯಾಸದಂತಹ ನಿಷ್ಠೆಗೆ ಮಾತ್ರ ಆದ್ಯತೆ ನೀಡಲಾಗಿದೆ. ಬ್ರಹ್ಮವನ್ನು ಅರಿಯುವುದು ಮತ್ತು ಬ್ರಹ್ಮವೇ ಆಗುವುದು ಮುಂಡಕದ ಉಪದೇಶದ ಸಾರ.

ಗತಾನುಗತಿಕವಾಗಿ ಬಂದ ಈ ವ್ಯಾಖ್ಯಾನವು ಏನೇ ಇರಲಿ, ಮುಂಡಕೋಪನಿಷತ್ತು ಇಷ್ಟೇ ಅಲ್ಲ ಎನ್ನುವುದು ನನ್ನ ಗ್ರಹಿಕೆ.

ಗಾತ್ರದಲ್ಲಿ ಚಿಕ್ಕದಾದರೂ ಮುಂಡಕವು ಕುತೂಹಲ ಹುಟ್ಟಿಸುವ ತನ್ನ ಚಿಂತನೆಗಳಿಂದಾಗಿ ವಿಶಿಷ್ಟವಾಗುತ್ತದೆ. ಕಠೋಪನಿಷತ್ತಿನ ಜನಪ್ರಿಯತೆಗೆ

ಕಾರಣವಾದ ನಾಟಕೀಯ ಅಂಶಗಳನ್ನು ಬಳಸಿಕೊಳ್ಳದ ಮುಂಡಕೋಪ ನಿಷತ್ತಿನಲ್ಲಿ ಎರಡು ವಿಷಯಗಳನ್ನು ಗುರುತಿಸಲು ಸಾಧ್ಯ. ಒಂದು, ಈ ಮಣ್ಣಿನ ಋಣದಿಂದ ಇಲ್ಲಿ ಪೂರ್ಣವಾಗಿ ನೀಗಿಕೊಳ್ಳುವ ಯೋಚನೆಗೆ ಮನ್ನಣೆಯಿಲ್ಲ; ಎರಡನೆಯದಾಗಿ, ಸಾತತ್ಯದಲ್ಲೇ ಮೂಡಿಬರುವ ಬದಲಾವಣೆ.

ಮುಂಡಕೋಪನಿಷತ್ತನ್ನು ಓದಿಕೊಂಡಾಗ ತಕ್ಷಣ ಕ್ರೋಢೀಕರಿಸ ಬಹುದಾದ ಎರಡು ಅನಿಸಿಕೆಗಳನ್ನು ಈ ಮೇಲಿನ ಎರಡು ಗ್ರಹಿಕೆಗಳ ಮೂಲಕ ಇಡಲು ಯತ್ನಿಸಿದ್ದೇನೆ. ಈ ಉಪನಿಷತ್ತನ್ನು ಓದುವಾಗ ನಾನು ಉದ್ದೇಶಪೂರ್ವಕವಾಗಿ ಮತಾಚಾರ್ಯರ ವ್ಯಾಖ್ಯಾನಗಳನ್ನು ಗಮನಕ್ಕೆ ತಂದುಕೊಳ್ಳಲಿಲ್ಲ. ನನ್ನ ನೇರ ಓದಿನ ಪರಿಣಾಮಗಳನ್ನು ಕಂಡುಕೊಳ್ಳಬೇಕು, ಉಪನಿಷತ್ತುಗಳ ಸಾರ್ಥಕ ಓದಿಗೆ ಅವಕಾಶವಿರಬೇಕು ಎನ್ನುವುದೇ ಇದಕ್ಕೆ ಕಾರಣ. ಅಥರ್ವವೇದದ ಮುಖ್ಯ ಸೆಳೆತ ಮಣ್ಣಿನ ವಾಸನೆಯಾದರೂ ಕೂಡ ಅಥರ್ವದ ಆ ಗುಣವಷ್ಟೇ ಮುಂಡಕೋಪನಿಷತ್ತನ್ನು ಅರ್ಥಪೂರ್ಣ ಗೊಳಿಸುವುದಿಲ್ಲ. ಯಾಕೆಂದರೆ, ಇಲ್ಲಿಯ ಯೋಚನಾಲಹರಿ ಆಧ್ಯಾತ್ಮಿಕ ವಾದದ್ದು. ಕಾಣದ ಮೂಲವನ್ನು ಅರಸುವುದಕ್ಕೆ, ಅರಸುವ ತನ್ಮಯತೆ ಯಿಂದಲೇ ತಾದಾತ್ಮ್ಯವನ್ನು ಸಂಪಾದಿಸುವುದಕ್ಕೆ ಇಲ್ಲಿ ಆದ್ಯತೆಯಿದೆ. ಆದರೆ ಕಠೋಪನಿಷತ್ತಿನ ಆಗ್ರಹ ಮುಂಡಕದಲ್ಲಿ ಇಲ್ಲ. ಈ ಶೈಲಿಯು ನಮ್ಮ ಮನವೊಲಿಸುವ ರೀತಿಯನ್ನು ಗಮನಿಸಿದರೆ ಆಗ್ರಹಗಳಿಂದ ಕೂಡಿದ ಯಾವ ಚಿಂತನೆಯೂ ಸಾಚಾ ಆಗಲಾರದು ಎನ್ನುವ ನಿರ್ಣಯಕ್ಕೆ ಬರಬೇಕಾಗುತ್ತದೆ. ಆಗ್ರಹದ ಜೊತೆಗೆ ಕಠೋಪನಿಷತ್ತು ಯುಕ್ತಿಯನ್ನು ಅವಲಂಬಿಸುತ್ತದೆ. ಮುಂಡಕದಲ್ಲಿ ಯುಕ್ತಿಗೆ ಜೋತು ಬೀಳಬೇಕಾದ ಅವಶ್ಯಕತೆಯಿಲ್ಲ. ಇದರ ಆಧ್ಯಾತ್ಮಿಕ ಚಿಂತನೆ ಮತ್ತು ಪರಮಪುರುಷನನ್ನು ಅಂದರೆ ಸತ್ಯವನ್ನು ಅರಿಯುವ ಹಂಬಲ ಈ ಎರಡೂ ಗುಣಗಳು ಉಪನಿಷತ್ತುಗಳ ಘನ ಪರಂಪರೆಗೆ ಅನುಗುಣವಾಗಿದ್ದರೂ ಕೂಡ ಇದರ ಋಷಿ ತನ್ನ ಅಂತರಂಗವನ್ನು ಸುತ್ತಲಿನ ಪ್ರಕೃತಿಯ ಪ್ರತಿಮೆಗಳಲ್ಲಿ ಕಾಣುವುದು ಉಪನಿಷತ್ತುಗಳ ಸ್ವಭಾವಕ್ಕೆ ಹೊರತಾದುದು.

*　　　*　　　*

ಬದುಕಿನ ಸಂಭ್ರಮದಿಂದ ಮುಖ ಹೊರಳಿಸಿದರೆ ಆಧ್ಯಾತ್ಮಿಕತೆ ಗಟ್ಟಿಗೊಳ್ಳುವುದಿಲ್ಲ; ಆ ಸಂಭ್ರಮ ಜೀವದ ಸಂಭ್ರಮ. ಇಂತಹ ಸಂಭ್ರಮವು ಎದುರುಗೊಂಡಾಗ ತನ್ನ ಸಂದೇಹಗಳಿಗೆ ವಿವರಗಳನ್ನು ತುಂಬುವ, ಹಾಗೆ

ವಿವರಗಳು ಒದಗಿಬರುವಾಗ ಸಂದೇಹಗಳು ಇನ್ನೂ ಖಚಿತವಾಗುವ ಅಥವಾ ನಷ್ಟಗೊಳ್ಳುವ ಸಂದರ್ಭವನ್ನು ನಿರ್ಮಲವಾಗಿ ಸ್ವೀಕರಿಸುವುದರಿಂದ ಮಾತ್ರ ಅಂತಹ ಮನಸ್ಸು ಗಟ್ಟಿಗೊಳ್ಳುತ್ತದೆ. ಹೀಗಿರುತ್ತ, ಜೀವದ ಸಂಭ್ರಮದಿಂದ ಉಲ್ಲಾಸಪಡುವುದು ಕಠೋಪನಿಷತ್ತಿನ ದೃಷ್ಟಿಯಲ್ಲಿ ಅಧ್ಯಾತ್ಮಕ್ಕೆ ವಿರೋಧಿಯಾಗುತ್ತದೆ. ಆದರೆ ಮುಂಡಕೋಪನಿಷತ್ತಿನ ಋಷಿಗೆ ತನ್ನ ಜೀವನ ದೃಷ್ಟಿಯನ್ನು ತನ್ನ ಮನಸ್ಸಿನಲ್ಲಿರುವ ಪರಮಗಮ್ಯದ ಜೊತೆಗೆ ತಾಳೆ ನೋಡಿಕೊಳ್ಳಲು ಇಂತಹ ಧೋರಣೆ ಅಗತ್ಯವೆನಿಸುತ್ತದೆ. ಈ ಋಷಿ ಶ್ರದ್ಧೆಗೆ ಮರುಳಾದವನು. ಇವನು ಶ್ರದ್ಧೆಯಿಲ್ಲದಿದ್ದರೆ ಪ್ರಕೃತಿಯ ಉಲ್ಲಾಸದ ಕ್ರೀಡೆಯನ್ನು ನೋಡಲು ಸಾಧ್ಯವಿಲ್ಲ ಎಂದು ನಂಬಿದವನು. ನೋಡುವ ರೀತಿಯಲ್ಲಿಯೇ ಪ್ರಕಟಗೊಳ್ಳುವ ಈ ಶ್ರದ್ಧೆ ಇಲ್ಲಿ ಬದುಕುವುದಕ್ಕೆ ಬದ್ಧವಾದ ಹೊಸ ಆಧ್ಯಾತ್ಮಿಕತೆಯನ್ನು ಬೋಧಿಸುತ್ತದೆ.

ಇದನ್ನು ಹೇಳುವ ನಲುವಾಗಿ, ನೋಡಿದುದನ್ನು ಮಾಧ್ಯಮವಾಗಿ ಬಳಸುವ ಮುಂಡಕೋಪನಿಷತ್ತಿನ ಋಷಿ ಕಾಣಲಾಗದ್ದನ್ನು ವಿವರಿಸಲು ಕಂಡದ್ದನ್ನು ರೂಪಕವಾಗಿಸುವ ಅನುಭಾವಿಯಾಗುತ್ತಾನೆ; ಕಲ್ಪನಾಶಕ್ತಿಯ ವಿಲಾಸಕ್ಕೆ ಆಕರ್ಷಿತನಾಗದೆ ಎವೆಯಿಕ್ಕದ ಕಣ್ಣನ್ನು ನಂಬಿ ಕೂರುತ್ತಾನೆ.

ಇಷ್ಟೆಲ್ಲ ತೋರುವುವು ಈಶ ಕೇನ ಕಠೋಪನಿಷತ್ತುಗಳನ್ನು ಓದಿದ ನಂತರ ನಾನು ಓದಿದ ಮುಂಡಕೋಪನಿಷತ್ತಿನಿಂದ; ಆದರಲ್ಲಿಯೂ ಮನೋಹರವಾದ ಈ ಎರಡು ಪದ್ಯಗಳಿಂದ :

**''ದ್ವಾ ಸುಪರ್ಣಾ ಸಯುಜಾ ಸಖಾಯಾ**
**ಸಮಾನಂ ವೃಕ್ಷಂ ಪರಿಷಸ್ವಜಾತೇ,**
**ತಯೋರನ್ಯಃ ಪಿಪ್ಪಲಂ ಸ್ವಾದು ಅತ್ತಿ**
**ಅನಶ್ನನ್ ಅನ್ಯೋ ಅಭಿಚಾಕಶೀತಿ''** – *(ಮುಂಡಕ 3. 1. 1)*

– ಎರಡು ಜೊತೆಗಾರ ಹಕ್ಕಿಗಳು ಮರದ ಮೇಲೆ ಕುಳಿತಿವೆ. ಅವುಗಳಲ್ಲಿ ಒಂದು ಸ್ವಾದಭರಿತವಾದ ಪಿಪ್ಪಲದ ಹಣ್ಣನ್ನು ಕುಕ್ಕಿ ತಿನ್ನುತ್ತಿದೆ. ಮತ್ತೊಂದು, ತಿನ್ನದೆ ಸುಮ್ಮನೆ ಗಮನಿಸುತ್ತಿದೆ.''

**''ಸಮಾನೇ ವೃಕ್ಷೇ ಪುರುಷೋ ನಿಮಗ್ನೋ**
**ಅನೀಶಯಾ ಶೋಚತಿ ಮುಹ್ಯಮಾನಃ,**
**ಜುಷ್ಟಂ ಯದಾ ಪಶ್ಯತಿ ಅನ್ಯಮೀಶಂ**
**ಅಸ್ಯಮಹಿಮಾನಮಿತಿ ವೀತಶೋಕಃ''** – *(ಮುಂಡಕ 3. 1. 2)*

– ಮರವೇರಿ ಕುಳಿತ ಮನುಷ್ಯ ಮೋಹದಲ್ಲಿ ಮುಳುಗಿ ಅಸಹಾಯಕನಾಗಿ

ಶೋಕಿಸುತ್ತಿದ್ದಾನೆ. ಆದರೆ ಅಲ್ಲೇ ಕುಳಿತ ಸಂಗಾತಿಯ ಶಾಂತಿಯ ಬೆಳಕನ್ನು ಪಡೆದು ನಿರ್ಮಲನಾಗುತ್ತಾನೆ; ಅವನ ಸ್ವಚ್ಛಂದತೆಯನ್ನು ಘನತೆಯನ್ನೂ ನೋಡಿ ಶೋಕವನ್ನು ಗೆಲ್ಲುತ್ತಾನೆ.''

ತಾನು ಪಡೆದಷ್ಟರಿಂದಲೇ ಬದುಕಿನ ಅರ್ಥವನ್ನು ಬರೆಯಬೇಕೆನ್ನುವ ಮುಂಡಕೋಪನಿಷತ್ತಿನ ತತ್ವಚಿಂತನೆ ಈ ಪದ್ಯಗಳಿಂದ ಶೋಭಾಯಮಾನ ವಾಗುತ್ತದೆ. ಹಣ್ಣನ್ನು ಕುಕ್ಕುವ, ಸ್ವಾದಿಷ್ಟವಾದುದಕ್ಕೆ ಹಂಬಲಿಸುವ ಒಂದು ಹಕ್ಕಿ ಮತ್ತು ಸ್ವಾದದ ಭೋಗದ ಎದುರು ನಿಶ್ಚಲತೆಯನ್ನು ಕಳೆದುಕೊಳ್ಳದೆ ಅದರ ಅರ್ಥವನ್ನು ಮನದಟ್ಟು ಮಾಡಿಕೊಳ್ಳುವ ಮತ್ತೊಂದು ಹಕ್ಕಿ – ಎರಡೂ ಜೊತೆಗಾರ ಹಕ್ಕಿಗಳೇ. ಅವುಗಳ ಆನಂದಕ್ಕೆ ಮೂಲವಾದ ಸುಂದರವಾದ ರೆಕ್ಕೆಗಳು, ಅವುಗಳ ಸಖೀಭಾವ, ಅವು ಆಲಂಗಿಸಿರುವ ಒಂದೇ ಮರ, ತಿನ್ನುವ ಸುಖ ಅಥವಾ ಕಷ್ಟವನ್ನು ನೀಡಿದ ಅದೇ ಮರದ ಹಣ್ಣು, ಅಲ್ಲೇ ಹುಡುಕಬೇಕಾದ ಅರ್ಥ, ಅರ್ಥ ಸಿಗದಂತೆ ಆಟವಾಡಿಸುವ ಅಲ್ಲೇ ಲಭ್ಯವಾಗುವ ಆಸ್ವಾದ – ಇವೆಲ್ಲವೂ ಏಕಕಾಲದಲ್ಲಿ ಹಕ್ಕಿಗಳ ಪ್ರಕೃತಿಯಿಂದ ಮನುಷ್ಯನ ಬದುಕಿಗೆ ಆತುಕೊಳ್ಳುತ್ತವೆ. ಋಷಿಯ ನೋಟ ಹೀಗೆ ಸಾರ್ಥಕವಾಗಿ, ಬದುಕುವ ಖುಶಿಯನ್ನು ಇಷ್ಟಪಡುವ ಮನುಷ್ಯನಿಗೆ ಅರ್ಥಪೂರ್ಣವೆನ್ನಿಸಿ ನಿಜವಾಗುತ್ತದೆ. ಮರ ಮತ್ತು ಮರದ ಶಾಖೋಪಶಾಖೆಗಳಿಗೆ ಕಚ್ಚಿಕೊಳ್ಳುವ ಹಣ್ಣುಗಳೇ ಹಕ್ಕಿಗಳ ಬದುಕು ಹಾಗೂ ಭೋಗ. ಪಿಪ್ಪಲವನ್ನು ಬಿರಿದು ತಿನ್ನುವ ಹವಣಿಕೆಯಲ್ಲಿರುವ ಪಕ್ಷಿ ಬದುಕುವ ಕಷ್ಟಕ್ಕೋ ಸುಖಕ್ಕೋ ಸಿಲುಕಿದೆ. ಅದರ ಮೋಹ ಅಸಹಾಯಕತೆಗಳು ಜೊತೆಗಾರ ಪಕ್ಷಿಗಿಲ್ಲ. ಕುಕ್ಕಿ ತಿನ್ನುವ ಆತುರದಿಂದ, ಭೋಗದ ಗರಜಿನಿಂದ ಮುಕ್ತವಾದ ಪಕ್ಷಿ ಅದು.

ಇಲ್ಲಿ ಮೊದಲನೆಯ ಪದ್ಯದಲ್ಲಿ ಹಕ್ಕಿಯ ಮೇಲಿರುವ ಫೋಕಸ್ಸು ಎರಡನೆಯ ಪದ್ಯದಲ್ಲಿ ಅನಾಮತ್ತಾಗಿ ಮನುಷ್ಯನ ಮೇಲೆ ವರ್ಗವಾಗಿದೆ. ಅವನೂ ಅವನ ಜೊತೆಗಾರನೂ ಎರಡನೆಯ ಪದ್ಯದಲ್ಲಿ ಮರದ ಮೇಲಿನ ಹಕ್ಕಿಗಳು. ಭೋಗ ಮತ್ತು ಮೋಹದ ದೆಸೆಯಿಂದ ಅವನು ದಣಿದಿದ್ದಾನೆ. ಅವನ ಶೋಕಕ್ಕೆ ಈ ಎಲ್ಲ ಒತ್ತಡಗಳೇ ಕಾರಣ. ಬದುಕುವ ಮೋಹವು ಕಷ್ಟಕ್ಕೆ ಎಡೆಮಾಡಿಕೊಡಬಾರದು. ಮನುಷ್ಯ ಈ ಕಷ್ಟವನ್ನು ನೀಗಿಕೊಳ್ಳಲು ಸಾಧ್ಯವಾಗುವುದೇ ಆತ ತನ್ನ ಅಂತರಂಗದೊಳಗೆ ಬಿಟ್ಟುಕೊಳ್ಳಬೇಕಾದ ತಳಮಳವಿಲ್ಲದ ಶಾಂತಿಯಿಂದ. ಹೀಗೆ ಶಾಂತಿ ನೆಲೆಸಿದಾಗ ಆತ ಪ್ರಸನ್ನನಾಗುತ್ತಾನೆ. ತನ್ನ ಶೋಧದ ಸಾಧ್ಯತೆಗಳೆಲ್ಲ ತನ್ನ ಬಳಿಯೇ ಇರುತ್ತ

ಮನುಷ್ಯನಿಗೆ ಬದುಕು ತ್ಯಾಜ್ಯವಲ್ಲ ಎನ್ನುವುದು ಮುಂಡಕದ ಋಷಿ ಬಗೆಹರಿಸಿಕೊಳ್ಳುವ ತಾತ್ವಿಕ ಸಂದೇಹ.

* * *

ಇದರಿಂದ, ಕೇನೋಪನಿಷತ್ತಿನಲ್ಲಿ ತೋರುವ ಜೀವನಶ್ರದ್ಧೆಯೇ ಮುಂಡಕೋಪನಿಷತ್ತಿನಲ್ಲಿ ಕೂಡ ವಿಷಯವಾಗಿದೆ ಎಂದು ಸಮೀಕರಿಸಿ ತೋರಿಸುವುದು ನನ್ನ ಇಂಗಿತವಲ್ಲ. ಆಧ್ಯಾತ್ಮಿಕ ಸಾಧನೆ ಮಾಡುವವನು ಬದುಕಿಗೆ ಬೆನ್ನುತೋರಿಸಬೇಕಾಗಿಲ್ಲ, ಬದುಕುವ ನಮ್ಮ ವೈಯುಕ್ತಿಕ ಪರಿಯ ಲೋಪ-ದೋಷಗಳು ಏನೇ ಇರಲಿ ಬದುಕಿನ ಬಗ್ಗೆ ಅಭಿರುಚಿಯು ಪರಮಾತ್ಮನ ಧ್ಯಾನ-ಚಿಂತನೆಗಳಿಗೆ ಅಡ್ಡಿಯಾಗಲಾರದು ಅನ್ನುವುದಷ್ಟೆ ಮುಂಡಕದ ಕಾಣ್ಕೆಯಾಗಿದೆ. ವ್ಯಕ್ತಿಯ ಸಾಧನೆಗಳು ಸಮೂಹ ಪ್ರಜ್ಞೆಯ ಪ್ರೇರಣೆಯಿಂದ ಚಾಲನೆಗೊಳ್ಳದೆ ವೈಯುಕ್ತಿಕ ಒತ್ತಡದಿಂದ ಮಾತ್ರ ಉಂಟಾಗುತ್ತವೆ ಅನ್ನುವವರೆಗೂ ನನ್ನ ಈ ಉಪನಿಷತ್ತಿನ ಓದಿನ ಅರ್ಥ ವಿಸ್ತರಿಸುತ್ತದೆ. ಈ ಕಾರಣಕ್ಕಾಗಿ ಮುಂಡಕದ ಋಷಿಯ ಅಭಿಪ್ರಾಯದಲ್ಲಿ ವ್ಯಕ್ತಿ ಸ್ವಯಂಪೂರ್ಣನಾಗಿರುತ್ತಾನೆ. ಸೃಷ್ಟಿಯಲ್ಲಿ ಕಂಡುಬರುವ ಸಂಕೀರ್ಣತೆಯೆಲ್ಲ ಅವನಿಗೆ ಆಧ್ಯಾತ್ಮಿಕ ಸಂಕೇತ. ಜೇಡದ ಉದರದಿಂದ ಸೃಷ್ಟಿಯಾಗುವ ಎಳೆ, ತಿರುಗಿ ಅದರೊಳಗೇ ಲೀನವಾಗುವ ಜೇಡ-ಇವೆಲ್ಲ ಪರಮಾತ್ಮನ ಹಾಗೂ ಅವನ ಸೃಷ್ಟಿಯ ನಡುವಣ ಸಂಬಂಧದ ಯಥಾನಕಲು. ಕಠೋಪನಿಷತ್ತಿನ ದೃಷ್ಟಿಯಲ್ಲಿ ಈ ಎಲ್ಲ ಭೌತಿಕ ದೃಶ್ಯಗಳ ಪರಿಣಾಮಗಳಿಂದ ತಪ್ಪಿಸಿಕೊಂಡು ವಿಚಲಿತನಾಗದಿರುವುದೇ ಆಧ್ಯಾತ್ಮಿಕ ಸಾಧನೆ ಮಾಡುವವನ ಮೊದಲನೆಯ ಕರ್ತವ್ಯ. ಈ ಅಭಿಪ್ರಾಯವನ್ನು ಒಪ್ಪಿಕೊಂಡೂ ಸಹ ಮುಂಡಕವು ಬದುಕಿನ ಫಲಾಫಲಗಳ ಬಗ್ಗೆ ಹೊಸ ದೃಷ್ಟಿಯನ್ನು ತಾಳುತ್ತದೆ. ಅಂದರೆ, ಬದುಕಿನಲ್ಲಿ ಅಭಿರುಚಿ ಆಧ್ಯಾತ್ಮಿಕ ಸಾಧನೆಗೆ ಅಡ್ಡಿಯಲ್ಲ, ಅಡ್ಡಿಯಾಗಕೂಡದು ಸಹ.

ಹಕ್ಕಿಗಳ ಸಂಭ್ರಮವನ್ನು ಕಂಡು ಮನುಷ್ಯನ ಆಧ್ಯಾತ್ಮಿಕತೆಯ ಸ್ವರೂಪವನ್ನು ಚಿಂತಿಸಲು ಹೊರಡುವ ಈ ಋಷಿಯ ಮನೋಗತದ ಬಗ್ಗೆ ನನಗೆ ತೋರಿದ ಈ ವಿವರಗಳು ಇಡೀ ಮುಂಡಕೋಪನಿಷತ್ತಿನಲ್ಲಿ ಪುಷ್ಟಿ ಪಡೆದಿವೆಯೇ? ಏಕೆಂದರೆ ಓಂಕಾರವು ಪರಮಾತ್ಮನ ಸ್ವರೂಪದ ಸಂಕೇತ ಎನ್ನುತ್ತದೆ ಕಠೋಪನಿಷತ್ತು. ಇದನ್ನು ಮುಂಡಕವೂ ಒಪ್ಪಿಕೊಳ್ಳುತ್ತದೆ. ಕಠದ ಆಲೋಚನೆಯನ್ನು ಉಳಿಸಿಕೊಂಡೂ ಸಹ ಇದು ಜೀವನದಲ್ಲಿ

ತೊಡಗುವಿಕೆಯನ್ನು ಆಧ್ಯಾತ್ಮಿಕ ಶೃಂಗ ಸ್ಥಿತಿಯನ್ನು ತಲುಪಲು ಪ್ರತಿಬಂಧಕ ಎಂದು ಬಗೆಯುವುದಿಲ್ಲ. ಈ 'ತೊಡಗುವಿಕೆ'ಯನ್ನು ಕಠವು ನಿಷ್ಠುರವಾಗಿ ನಿಷೇಧಿಸುತ್ತದೆ. ಅಲ್ಲದೆ, ಪ್ರತಿಬಂಧಕವೆಂದು ತಿಳಿದಿದ್ದರೆ ಮುಂಡಕದ ಋಷಿಗೆ ಮರವನ್ನು ಆಸರೆ ಮಾಡಿಕೊಂಡ ಹಕ್ಕಿಗಳ ಜೋಡಿ ಕಾಣಿಸುತ್ತಿರಲಿಲ್ಲ. ಇದಕ್ಕಿಂತ ಹೆಚ್ಚಾಗಿ, ಯಜ್ಞಾದಿ ಕರ್ಮಗಳು ನಿಜವಾದ ಸಾಧನೆಗಳೇನೂ ಅಲ್ಲ, ಅವು ಮೋಹಿತ ಜನರ ಆಚರಣೆ ಎಂದು ಈ ಋಷಿ ಸಾರುತ್ತಿರಲಿಲ್ಲ. ಹೀಗೆ, ಹಕ್ಕಿಗಳ ಸಂಭ್ರಮವೇ ಮುಂಡಕದ ಕೇಂದ್ರ. ಇಲ್ಲಿ ಸತ್ಯವಲ್ಲದುದಕ್ಕೆ ಜಾಗವಿಲ್ಲ. ಹೀಗಿರುತ್ತ, ಸತ್ಯವನ್ನು ಧ್ಯಾನದಿಂದ, ಏಕಾಗ್ರಬುದ್ಧಿಯ ನೋಟದಿಂದ ಅನಾವರಣಗೊಳಿಸಿಕೊಳ್ಳಬೇಕು. ಈ ಸಂದರ್ಭದಲ್ಲಿ ಮುಂಡಕದ ಋಷಿ ಹೇಳುವ ಮಾತು ಎಲ್ಲ ಕಾಲಕ್ಕೂ ವರ್ತಮಾನವಾಗಿ ನಿಲ್ಲುತ್ತದೆ. ಉದಾಹರಣೆಗೆ : ''ಸತ್ಯಮೇವ ಜಯತೇ ನಾನೃತಂ'', ಮತ್ತು ''ನಾಯಮಾತ್ಮಾ ಪ್ರವಚನೇನ ಲಭ್ಯಃ''

ನದಿ ಹರಿಯುತ್ತದೆ, ಹರಿಯುತ್ತಲೇ ನಾಮ-ರೂಪಗಳನ್ನು ತೊರೆಯುತ್ತದೆ. ಹೀಗೆ ಬದುಕುವ ಹಾಗೂ ಕಳಚಿಕೊಳ್ಳುವ ಸಾಧನೆ ಮಾಡುತ್ತ ವಿಶ್ವಾತ್ಮನಲ್ಲಿ ಐಕ್ಯವಾಗಬೇಕು ಎನ್ನುವುದು ಮುಂಡಕದ ಆಶಯ. ಇದುವೇ ಬದುಕುವ ಪ್ರೀತಿ; ಇದುವೇ ಆಧ್ಯಾತ್ಮಿಕತೆಯ ಶೃಂಗ ಸ್ಥಿತಿ.

* * *

ನನ್ನ ಈ ಬರವಣಿಗೆಯ ಆಶಯ ಉಪನಿಷತ್ತಿನ ಋಷಿಗಳ ಬದುಕನ್ನು ಅವರ ನುಡಿಗಳಲ್ಲಿಯೇ ಅರಸುವುದು ಮತ್ತು ಅವರ ಮನಸ್ಸನ್ನು ದೂರದ ಈ ವರ್ತಮಾನದಲ್ಲಿ ನಿಂತು ಪುನಃ ರಚಿಸುವುದು. ಹೀಗೆ ಮುಂಡಕವನ್ನು ಓದಿದಾಗ ಇದನ್ನು ಹಾಡಿದ ಋಷಿಯ ನಯ-ನಾಜೂಕು, ಸೂಕ್ಷ್ಮ ಅರಿವು ಹಾಗೂ ಒಳ್ಳೆಯ ಚಿಂತನೆಗಳು ಮುದ ನೀಡುತ್ತವೆ. ಇಲ್ಲಿ ಕೆಲಸ ಮಾಡಿರುವ ಉತ್ತಮ ಮನಸ್ಸು ಈ ಉಪನಿಷತ್ತಿನ ಶಾಂತಿಮಂತ್ರದಲ್ಲಿಯೇ ಪ್ರಕಟವಾಗುತ್ತದೆ :

**''ಓಂ ಭದ್ರಂ ಕರ್ಣೇಭಿಃ ಶ್ರುಣುಯಾಮ ದೇವಾ**
**ಭದ್ರಂ ಪಶ್ಯೇಮ ಅಕ್ಷಭಿರ್ಯಜತ್ರಾಃ,**
**ಸ್ಥಿರೈರಂಗೈಃ ತುಷ್ಟುವಾಂಸಸ್ತನೂಭಿಃ**
**ವ್ಯಶೇಮ ದೇವಹಿತಂ ಯದಾಯುಃ''**

– ಓ ದೇವತೆಗಳೇ, ಒಳ್ಳೆಯದನ್ನು ನಾವು ಆಲಿಸುವಂತಾಗಲಿ,

ಒಳ್ಳೆಯದನ್ನು ನಾವು ಕಾಣುವಂತಾಗಲಿ, ಆರೋಗ್ಯಪೂರ್ಣರಾಗಿ, ದೃಢವಾದ ಅಂಗಾಂಗಗಳಿಂದ ಕೂಡಿದ್ದು ದೇವತೆಗಳನ್ನು ಸ್ತುತಿಸುತ್ತ ನಾವು ದೀರ್ಘಕಾಲ ಬದುಕುವಂತಾಗಲಿ''. ಹೀಗೆ ಮುಂಡಕೋಪನಿಷತ್ತಿನ ಋಷಿಯ ಮನಸ್ಸು ಮತ್ತು ಆಧ್ಯಾತ್ಮಿಕ ಚಿಂತನೆ ಎರಡೂ ಈ ಶಾಂತಿಮಂತ್ರದಲ್ಲಿ ರೂಪಧಾರಣ ಮಾಡುತ್ತವೆ.

# ತೈತ್ತಿರೀಯೋಪನಿಷತ್ತಿನ ನವ್ಯಮಾರ್ಗ

ಬದುಕೆಂದರೆ ಬರಿಯ ಹೋರಾಟವೆಂದೂ ಹೋರಾಟವೆಂದರೆ ಐಹಿಕಸುಖದ ಮಾಯೆಯನ್ನು ಶಾಶ್ವತ ಸುಖ ನೀಡುವ ಆಧ್ಯಾತ್ಮಿಕ ಚಿಂತನೆಯ ಮೂಲಕ ಸದಾಕಾಲ ಹೊಡೆದಟ್ಟುತ್ತ ಇರುವುದೆಂದೂ ಅಧ್ಯಾತ್ಮವಾದವು ನೀಡುತ್ತ ಬಂದಿರುವ ಚಿತ್ರಣವಾಗಿದೆ; ಅಥವಾ ಇಲ್ಲಿಯ ತನಕ ನಮ್ಮ ಪರಂಪರೆಯ ಮುಖ್ಯ ಪ್ರವಾಹವು ಜೀವನವನ್ನು ಮೇಲೆ ಹೇಳಿದ ರೀತಿಯಲ್ಲಿ ಪರಿಭಾವಿಸಿಕೊಂಡು ಬಂದಿದೆ. ಅಂದ ಮಾತ್ರಕ್ಕೆ, ಇದೇ ಜೀವನದ ಸಹಜ ಪ್ರಕೃತಿ ಎಂದು ಅರ್ಥವಲ್ಲ. ಏಕೆಂದರೆ ಈ ಹೋರಾಟ ಸಿದ್ಧಾಂತವನ್ನು ಒಪ್ಪುವುದು ಜೀವನ ಬೇರೆ ಮನುಷ್ಯ ಬೇರೆ ಎಂದು ಒಪ್ಪಿದಂತೆ. ಇಂತಹ ಮನೋಧರ್ಮವನ್ನು ಈಶಾವಾಸ್ಯ ಉಪನಿಷತ್ತಿನ ಭಾವುಕ ಪ್ರಪಂಚ ತಿದ್ದುತ್ತದೆ. ಹಾಗೆಯೇ ಇನ್ನೂ ಕೆಲವು ಉಪನಿಷತ್ತುಗಳ ಒಳಸುಳಿಗಳು ಈ ಹೋರಾಟ ಸಿದ್ಧಾಂತವನ್ನು ಒಪ್ಪುವುದಿಲ್ಲ. ಉದಾಹರಣೆಗೆ, ತೈತ್ತಿರೀಯೋಪನಿಷತ್ತು. ತೈತ್ತಿರೀಯವು ಯಜುರ್ವೇದಕ್ಕೆ ಸೇರಿದ ಉಪನಿಷತ್ತು. ತೈತ್ತಿರೀಯದ ದೃಷ್ಟಿಯಲ್ಲಿ ಬದುಕುವುದೆಂದರೆ ಮಾಯೆಯೊಡನೆ ಸೆಣಸಾಡುವುದಲ್ಲ, ಸಫಲತೆಗಾಗಿ ಕಾತರಿಸುತ್ತ ಎಲ್ಲವನ್ನೂ ಒಳಗೊಳ್ಳುವಿಕೆ. ವಿಪರೀತಕ್ಕೆ ತಲುಪಿದ ಪರಲೋಕ ನಿಷ್ಠೆಯ ಅಧ್ಯಾತ್ಮವಾದಕ್ಕೆ ವಿರುದ್ಧವಾದ, ಇಹಲೋಕಕ್ಕೆ ಗಂಟು ಬೀಳುವ, ವ್ಯಕ್ತಿವಾದವನ್ನು ಈ ಉಪನಿಷತ್ತು ಬೋಧಿಸುತ್ತದೆ.

ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಗೆ ಸೇರಿದ ಈ ಉಪನಿಷತ್ತಿನಲ್ಲಿ ಮೂರು ಭಾಗಗಳಿವೆ. ಮೊದಲನೆಯದು ಶಿಕ್ಷಾವಲ್ಲಿ, ಅನಂತರ ಬ್ರಹ್ಮಾನಂದ ವಲ್ಲಿ, ಕೊನೆಯದು ಭೃಗುವಲ್ಲಿ. ಇವುಗಳ ವಿಷಯ ನಿರೂಪಣೆಯಲ್ಲಿ ಯಾವುದೇ ಒಂದು ನಿರ್ದಿಷ್ಟ ಕ್ರಮವಿಲ್ಲ. ನೆಲಕ್ಕೆ ಬಿದ್ದ ನೀರು ಸರ್ಪಗತಿಯಲ್ಲಿ ಎತ್ತೆತ್ತಲೋ ಹೋಗುವಂತೆ ಇಲ್ಲಿಯ ಚಿಂತನೆ ಹರಿಯುತ್ತದೆ. ಆದರೆ ಚಿಂತನೆಯಲ್ಲಿ ಆಧ್ಯಾತ್ಮಿಕವಾದಕ್ಕೆ ಸವಾಲಾಗಬಲ್ಲ ವ್ಯಕ್ತಿವಾದ – ವ್ಯಕ್ತಿಯ ಅನನ್ಯತೆಯ ಸ್ಥಾಪನೆ ಮುಖ್ಯವಾಗುತ್ತದೆ.

ಉಪನಿಷತ್ತುಗಳ ವೈಶಿಷ್ಟ್ಯವಾದ ಶಿಸ್ತು, ಆಲೋಚನೆಯ ನಯ-ನಾಜೂಕು, ಹಾಗೂ ಆಧ್ಯಾತ್ಮಿಕತೆಯಲ್ಲಿ ಮುಳುಗಿದ ಮನಸ್ಸು ತೈತ್ತಿರೀಯದಲ್ಲಿ

ಕಾಣುವುದಿಲ್ಲ ಎನ್ನುವ ಕಾರಣಕ್ಕಾಗಿ ಮಾತ್ರ ನಾನು ಇದನ್ನು 'ನವ್ಯಮಾರ್ಗ' ಎಂದು ಪರಿಗಣಿಸುತ್ತಿಲ್ಲ. ಈಶಾವಾಸ್ಯ, ಕೇನ, ಕಠ, ಮತ್ತು ಮುಂಡಕೋಪನಿಷತ್ತುಗಳನ್ನು ಓದಿ ಈಗಾಗಲೇ ಬರೆದು ಸ್ಪಷ್ಟಪಡಿಸಿಕೊಂಡ ನನಗೆ ತೈತ್ತಿರೀಯವನ್ನು ಓದಿ ಮುಗಿಸಿದಾಗ ಅನಿಸಿದ್ದು: ದೇವರ ಭೀತಿ ಅಥವಾ ದೇವರಿಲ್ಲದ ಭೀತಿಯಿಂದ ಈ ಉಪನಿಷತ್ತಿನ ಋಷಿ ಬಿಡುಗಡೆಗೊಂಡಿದ್ದಾನೆ. ಇವೆರಡನ್ನೂ ಬಿಟ್ಟು ಇಲ್ಲಿ ಋಷಿ ನಮ್ಮ ನೆಮ್ಮದಿಯ ದಾರಿಯನ್ನು ಹುಡುಕುತ್ತಾನೆ. ಈ ಹುಡುಕಾಟ ನಡೆದಾಗಲೂ ಬದುಕಿಗೆ ಎದುರಾಗುವ ಕಷ್ಟ-ಕೋಟಲೆಗಳನ್ನು ಸಹಿಸಲಾಗುವಂತೆ ಮಾಡುತ್ತಾನೆ ಹಾಗೂ ಸಜ್ಜನಿಕೆಗೆ ಬೇಕಾದ ಸಾಮಾಜಿಕ ಸಂಬಂಧಗಳ ಅಗತ್ಯವನ್ನು ಕಡಿಮೆಗೊಳಿಸುತ್ತಾನೆ. ಈ ವಸ್ತು ಕಠೋಪನಿಷತ್ತಿನದಾಗಿದ್ದರೆ ಇದೊಂದು ಕಠೋರ ವ್ರತವೇ ಆಗಿ ಬಿಡುತ್ತಿತ್ತು. ತೈತ್ತಿರೀಯದಲ್ಲಿ ಇದು ಛಲವಿಲ್ಲದ, ನಿಷ್ಠುರಗೊಳಿಸದ, ಬದುಕಿಗೆ ನಮ್ಮನ್ನು ಅಭಿಮುಖಗೊಳಿಸುವ ಆಯ್ಕೆಯಾಗುತ್ತದೆ. ಈ ಆಯ್ಕೆಯನ್ನು ವ್ಯಕ್ತಿತ್ವದಲ್ಲಿ ಬೆರೆಸುವ ದಿನನಿತ್ಯದ ಆಚರಣೆಯ ಇಲ್ಲಿಯ ಚಿಂತನೆ ನಮಗೆ ಎಷ್ಟು ಪರಿಚಿತವಾದುದೆಂದರೆ ಇದು ಸಾವಿರಾರು ವರ್ಷಗಳಿಂದ ನಮ್ಮ ಸಂವೇದನೆಯ ಒಂದಂಶವಾಗಿ ಪರಿಣಮಿಸಿದೆ. ತೈತ್ತಿರೀಯದ ಮೌಲ್ಯ ಪ್ರಪಂಚವು ನಮ್ಮ ದೈನಂದಿನ ತೃಪ್ತಿ ಮತ್ತು ಸೊಗಸುಗಳ ಬಗೆಯನ್ನಷ್ಟೆ ಒಳಗೊಂಡಿರುವುದರಿಂದ ಇದರಲ್ಲಿ ಒಂದು ಚೂರು ಸ್ವಾರ್ಥ, ಒಂದಷ್ಟು ವೈಯುಕ್ತಿಕತೆಯ ತನ್ಮಯಭಾವ, ಅಷ್ಟಿಷ್ಟು ಸಂಪನ್ನತೆಯ ಚಿಂತೆ – ಇವು ಜೀವನಾಡಿಯಂತೆ ಸಹಜವಾಗಿವೆ.

ತೈತ್ತಿರೀಯದ ಸರಿಯಾದ ಓದಿನಿಂದ ತಪ್ಪೊಪ್ಪಿಗೆಯ ಮತ್ತು ಆತ್ಮಸಾಕ್ಷಿಯಂತೆ ನಡೆಯುವ ಧಾರ್ಮಿಕ ವಿಧಿಯಿಲ್ಲದ ಹಿಂದೂಧರ್ಮದ ಕಣ್ಣು ತೆರೆಯಬೇಕಾಗಿದೆ. ಸನಾತನಧರ್ಮದಲ್ಲಿ ನಂಬಿಗೆಯಿಟ್ಟವರಿಗೆ ಇದು ಬಹಳ ಧಾರ್ಷ್ಟ್ಯದ ಅಭಿಪ್ರಾಯವೆಂದು ತೋರದಿರಲಿಕ್ಕಿಲ್ಲ. ತನ್ನ ಸಾಮಾಜಿಕ ಘನತೆಯನ್ನು ಹೆಚ್ಚಿಸಿಕೊಳ್ಳಲು ಇಂದು ಒಬ್ಬ ವಾಗ್ಮಿಯಾದ ದಗಾಕೋರನೂ ಕೂಡ ಹಿಂದೂ ತತ್ವಶಾಸ್ತ್ರ ಮತ್ತು ನೀತಿಶಾಸ್ತ್ರವನ್ನು ಚರ್ಚಿಸುತ್ತ ಬೋಧಿಸುತ್ತ ಗೆಲ್ಲುವುದನ್ನು ನೋಡುತ್ತೇವೆ. ಇಂತಹ ಬೋಧನೆಯ ಇನ್ನೊಂದು ರೂಪ ಹೀಗಿರಬಹುದು: ಆದರ್ಶ, ತ್ಯಾಗ, ಒಳ್ಳೆಯತನ, ಸಹನೆ, ಸಹಾನುಭೂತಿ, ಔದಾರ್ಯಗಳನ್ನು ಸಾರ್ವತ್ರಿಕ ಮೌಲ್ಯಗಳನ್ನಾಗಿ ಕಾಣಲು ಯತ್ನಿಸುವ ವ್ಯಕ್ತಿ ಒಂದೋ ಹುಂಬ ಕನಸುಗಾರನಾಗಿರುತ್ತಾನೆ, ಅಥವಾ ಮತ್ತೊಬ್ಬನ ಬಲಿದಾನವನ್ನು ಬಯಸುವ ಮಹತ್ವಾಕಾಂಕ್ಷೆಯ ರಾಜಕಾರಣಿಯಾಗಿರುತ್ತಾನೆ.

ಆದರೆ ಇಂಥ ಮೌಲ್ಯಗಳನ್ನು ಸಾರ್ವತ್ರಿಕಗೊಳಿಸುವ ಕುರಿತು ಯತ್ನಶೀಲನಾಗದೆ ತನ್ನ ಒಳಗಿನ ಪ್ರಪಂಚದ ಸರ್ವಸ್ವವನ್ನಾಗಿಸಲು ಯತ್ನಿಸುವ ತೈತ್ತಿರೀಯದ ಋಷಿಯ ರೀತಿ ಧರ್ಮದ ನಿಜವಾದ ಒಳದನಿಯಾಗಿರುತ್ತದೆ. ಅದು ಹೇಗೆ ಎನ್ನುವುದನ್ನು ತೈತ್ತಿರೀಯವೇ ನುಡಿಯುತ್ತದೆ. ಈ ಉಪನಿಷತ್ತಿನಲ್ಲಿ ಅನ್ನದ ಚಿಂತೆಯೂ ಇದೆ. ಜೊತೆಗೆ, ತನಗೆ ಕೀರ್ತಿ ಬೇಕು, ಶಿಷ್ಯರು ಬೇಕು, ಆಚಾರ್ಯನಿಗೆ ಪ್ರಿಯವಾದ ಧನವನ್ನು ಶಿಷ್ಯರು ತಂದುಕೊಡಲಿ ಎನ್ನುವಂತಹ ನಿರೀಕ್ಷೆಗಳನ್ನು ಮುಚ್ಚಿಟ್ಟುಕೊಳ್ಳಲಾಗದ ಪ್ರಾಮಾಣಿಕತೆಯೂ ಇಲ್ಲಿ ಕಾಣುತ್ತದೆ.

ಇದನ್ನೇ ಹೀಗೂ ಹೇಳಬಹುದು: ತನ್ನನ್ನು ಪೋಷಿಸಿದ ಪರಂಪರೆಯ ಆಧ್ಯಾತ್ಮಿಕ ತತ್ವಶಾಸ್ತ್ರವನ್ನು ತೈತ್ತಿರೀಯದ ಋಷಿ ಇಬ್ಬಂದಿತನಕ್ಕೆ ಒಳಗಾಗದೆ ಬದಿಗೆ ಸರಿಸುತ್ತಾನೆ; ಆಧ್ಯಾತ್ಮದ ಅನೇಕ ಆಕರ್ಷಕ ಚಿಂತನೆಗಳನ್ನು ತೊರೆದು ಬರೀ ಬದುಕುವಷ್ಟರಿಂದಲೇ ವ್ಯಕ್ತಿಯ ಘನತೆ ಹೆಚ್ಚಬಹುದಾದ, ಒಂದು ವಿಧದಲ್ಲಿ ಸದ್ಗುಣದ ಮೋಹವೆಂದೇ ಕರೆಯಬಹುದಾದ, ಹೊಸ ಅನುಭವದ ಕಷ್ಟವನ್ನು ತೆಗೆದುಕೊಳ್ಳುತ್ತಾನೆ. ಆದರೆ ಇವನು ತನ್ನ ಆಯುಷ್ಯದ ಲೆಕ್ಕಕ್ಕಾಗಿ ಹಾಗೂ ತನ್ನ ತೃಪ್ತಿಗಾಗಿ ಮಾತ್ರ ತಾನು ಸದ್ಗುಣಿಯಾಗಿ ಬದುಕಬೇಕೆಂದು ಬಯಸುತ್ತಾನೆ. ಅಂದರೆ ಲೋಲುಪತೆಗೆ ಗಂಟುಬೀಳುವ ಪದಾರ್ಥವಾದೀ ಧೋರಣೆಯೂ ಅಲ್ಲ ಇದು. ಚಿಂತನೆಯಿಂದ ವಿಶ್ವಸಮುದಾಯವನ್ನೇ ಒಳಗೊಳ್ಳುವ, ಆಕರ್ಷಣೆ ಹುಟ್ಟಿಸುವ ಹುಂಬತನವನ್ನು ಕೈಬಿಟ್ಟು ವಾಸ್ತವವಾಗಿ ತನಗಿರುವ ಸಂಪರ್ಕದ ಮಿತಿಯಲ್ಲಿ ವಿಶ್ವಭಾವನೆಯನ್ನು ತನ್ನದಾಗಿಸಿಕೊಂಡು ತನ್ನನ್ನು ಪರಿಶೀಲಿಸಿಕೊಳ್ಳುವ ಖಚಿತವಾದ ಗುರಿಯನ್ನು ಇಟ್ಟುಕೊಂಡಂತಹ ಬದುಕು ಇಲ್ಲಿ ಕಾಣುತ್ತದೆ. ತನ್ನ ಒಳ್ಳೆಯ ಬದುಕಿಗೆ ಬೇರೆ ಯಾವನೂ ಆದರ್ಶವಲ್ಲ, ಅದು ತಾನಾಗಿ ಫಲಿಸುತ್ತದೆ, ತಾನಾಗಿ ಪ್ರತಿಯೊಬ್ಬನಲ್ಲೂ ಫಲಿಸುತ್ತದೆ ಎನ್ನುವ ಧೋರಣೆ ಇದು. ಮರದ ಪ್ರತಿಯೊಂದು ಹಣ್ಣೂ ತನ್ನ ತೊಟ್ಟು ಮತ್ತು ರುಚಿಯಿಂದ ನಿಜವಾಗುವಂತೆ ತೈತ್ತಿರೀಯದ ಜೀವನಾದರ್ಶ ತಾನಾಗಿಯೇ ಪ್ರಾಮಾಣಿಕವಾದದ್ದೆನ್ನಿಸುತ್ತದೆ. ಈ ಕಾರಣದಿಂದ ಇಲ್ಲಿ ಮನುಷ್ಯನ ಸತ್ವಪರೀಕ್ಷೆಗೆ ಸಮಾಜ ತೀರಾ ಅನಿವಾರ್ಯವೆನಿಸುವುದಿಲ್ಲ. ಒಂದು ರೀತಿಯಲ್ಲಿ ಈ ವೈಯುಕ್ತಿಕತೆಯು ವ್ಯಕ್ತಿ ಬಯಸುವ ಸ್ವಾತಂತ್ರ್ಯಗಳಲ್ಲಿ ಅತಿ ಕಷ್ಟದ್ದು. ನಮ್ಮನ್ನು ಬೇರೆಯವರೊಡನೆ ಹೋಲಿಸಿಕೊಳ್ಳುತ್ತ ನಮ್ಮ ಸ್ವಾತಂತ್ರ್ಯವನ್ನು ರೂಢಿಸಿಕೊಂಡು ಅರಿಯುವುದು ಸುಲಭ. ವೈಯುಕ್ತಿಕತೆಯನ್ನು ಅರಸುವ ದಾರಿಯಲ್ಲಿ ಒಂದಿಷ್ಟು ತೂಕಡಿಸಿದರೂ – ಒಂದಂಶದಷ್ಟು

ಅಂತರ್ಮುಖತೆಯನ್ನು ಕಳೆದುಕೊಂಡರೂ – ಅವನು ಪಶುವಾಗುತ್ತಾನೆ. ಏಕಾಗ್ರತೆಯ ಕಾರಣ ತೈತ್ತಿರೀಯದ ಋಷಿಗೆ ಆಧ್ಯಾತ್ಮಿಕ ಆದರ್ಶವನ್ನು ತಿರುಗು ಮುರುಗು ಮಾಡಿ ಹೋಮದ ಹೊತ್ತಿನಲ್ಲಿ ತನ್ನ ಹಿತಕ್ಕೋಸ್ಕರ ಆಹುತಿಯನ್ನು ಅರ್ಪಿಸುವುದು ಸಂಕುಚಿತ ಮನೋಭಾವವೆಂದು ಅನ್ನಿಸುವುದಿಲ್ಲ :

> ''ನಾನು ಅಮೃತವನ್ನು ಒಯ್ಯುವವನಾಗಲಿ, ನನ್ನ ಇಂದ್ರಿಯಗಳಿಗೆ ಚಾಪಲ್ಯ ಬರಲಿ, ನಾಲಿಗೆ ಸವಿ ನುಡಿಯಲಿ, ಕಿವಿ ತುಂಬಾ ಆಲಿಸಲಿ. ಭಗವಂತನು (ನನ್ನ) ಬುದ್ಧಿಯಿಂದ ಮರೆಯಾದ ಕೋಶ. ದೇವರೇ, ನನ್ನ ಜ್ಞಾನವನ್ನು ರಕ್ಷಿಸು. ನನಗೆ ನೀಡುವವರು ಹೆಚ್ಚಾಗಲಿ. ಅನ್ನವನ್ನೂ ಹಸುಗಳನ್ನು ವಸ್ತ್ರಾದಿಗಳನ್ನೂ ಸದಾ ನನಗೆ ಪೂರೈಸು. ಸಮೃದ್ಧವಾಗಿ ಉಣ್ಣೆಯುಳ್ಳ ಪಶುಗಳ ಸಂಪತ್ತು ನನ್ನ ಬಳಿ ಬೆಳೆಯಲಿ. ಶಿಷ್ಯರು ಬಂದು ಬಂದು ನನ್ನ ಬಳಿ ಸೇರಲಿ. ಅವರ ಸಂಖ್ಯೆ ವೃದ್ಧಿಯಾಗಿ ಅವರು ಬಲಿಷ್ಠರಾಗಲಿ. ಅವರು ಶಾಂತಿಪ್ರಿಯರಾಗಿ ಇಂದ್ರಿಯಗಳ ಮೇಲಿನ ಅವರ ಹಿಡಿತ ಭದ್ರವಾಗಲಿ. ನಾನು ಯಶಸ್ವಿಯಾಗಬೇಕು, ನನ್ನನ್ನು ಸಿರಿ ಹುಡುಕಿಕೊಂಡು ಬರಬೇಕು, ಅದೃಷ್ಟಶಾಲಿಯಾಗಬೇಕು. ತೇಜಸ್ವಿಯಾದ ನನ್ನ ದೈವವೇ, ನಿನ್ನ ಅನಂತ ಕಿರಣಗಳಲ್ಲಿ ನಾನು ಮಿಂದು ಶುಚಿಯಾಗುವೆನು. ನೀರು ತಗ್ಗಿಗೆ ಹರಿಯುವಂತೆ, ಮಾಸಗಳು ಸಂವತ್ಸರದೊಳಗೆ ಸೇರಿಕೊಳ್ಳುವಂತೆ ಶಿಷ್ಯರು ನನ್ನ ಬಳಿಗೆ ಬಂದು ಸೇರಲಿ. ನೀನು ನನ್ನ ನೆರೆಯವನು. ನನ್ನನ್ನು ರಕ್ಷಿಸು. ನನ್ನೆಡೆಗೆ ಬಾ. ನನ್ನಿಂದ ನಿರ್ಗಮಿಸಿದ ಶಿಷ್ಯರು ಒಳ್ಳೆಯವರಾಗಲಿ.''

ಇದು ತೈತ್ತಿರೀಯದ ಋಷಿಯ ಬೇಡಿಕೆ. ಇಲ್ಲಿ ಅವನ ಮನಸ್ಸು ಔದಾರ್ಯ ಮತ್ತು ಸ್ವಾರ್ಥಗಳ ನಡುವೆ ತೂಗಾಡುತ್ತ ಮಾತಿನಲ್ಲಿ ರೂಪ ಪಡೆದಂತಿದೆ. ಋಷಿಯ ಪ್ರಾರ್ಥನೆಯೇನಿದ್ದರೂ ಕೊನೆಗೆ ತನ್ನ ಐಹಿಕ ಕಲ್ಯಾಣವೇ ಅವನಿಗೆ ದೊಡ್ಡದು. ತೈತ್ತಿರೀಯೋಪನಿಷತ್ತು ಹೀಗೆ ಅತ್ಯಂತ ವೈಯುಕ್ತಿಕವಾದ ನಿಲುವು ತೆಗೆದುಕೊಂಡು ಮನುಷ್ಯನ ಪ್ರಜ್ಞೆಯನ್ನು ಹಾಗೂ ಅವನ ನಂಬುಗೆಗಳನ್ನು ಈ ಹೊಯ್ದಾಟಗಳ ನಡುವೆ ತಂದು ನಿಲ್ಲಿಸುತ್ತದೆ. ವ್ಯಕ್ತಿ ಮತ್ತು ಸಮಾಜದ ನಡುವಿನ ಸಂವಾದದಲ್ಲಿ ಎದ್ದು ಕಾಣುವ ಸಮೂಹ ಹಿತದ ಆಗ್ರಹ ಇಲ್ಲಿ ಕಡಿಮೆಯಾಗಿ ವ್ಯಕ್ತಿಯ ತಪಸ್ಸಿಥಿಯು ಮಾತ್ರ ಇಲ್ಲಿ ಹಿರಿದಾಗುತ್ತದೆ – ಎನ್ನುವುದು ತೈತ್ತಿರೀಯದ ಏಕೈಕ ಅರ್ಥವಾಗಿರಬಹುದೇ !

ಈ ಕಾರಣಕ್ಕಾಗಿಯೇ ತೈತ್ತಿರೀಯದ ಋಷಿ ಸಂವೇದನೆಯಿಂದ ತಿಳಿಯಬೇಕಾದ ವಾಸ್ತವಿಕ ಮತ್ತು ನೈತಿಕ ಸಂಗತಿಗಳಿಗೆ ಬೆನ್ನು ತೋರಿಸುತ್ತಾನೆ ಎಂದು ಅನುಮಾನವುಂಟಾಗುವುದು ಸಹಜ. ಆದರೆ ಈ ಚಿಂತನೆ ಋಷಿಯ ವೈಯುಕ್ತಿಕ ಜಾಯಮಾನಕ್ಕೆ ಸೇರಿದುದು. ಹೇಗೆಂದರೆ, ಋಷಿಯು ತತ್ವಶಾಸ್ತ್ರದ ಶಿಸ್ತು ಮತ್ತು ವರಸೆಗಳನ್ನು ಮುರಿದು ನುಗ್ಗಿ ಬಂದಿದ್ದಾನೆ. ಋಷಿಯು ಸಾಮಾಜಿಕ ಸಂಬಂಧಗಳಿಗೆ ಜಡನಾದಂತೆ ತೋರುವುದು ನಿಜವಾದರೂ ಒಬ್ಬ ವಿಶಿಷ್ಟ ವ್ಯಕ್ತಿಯ ಅಂತರಂಗದಿಂದ ಯೋಚನೆ ತೇಲಿ ಬರುವಾಗಿನ ಆದಿಮ ರೂಪವೇ ಇದಾಗಿದೆ. ಅಂದರೆ, ಇದಿಷ್ಟು ಯೋಚನಾಲಹರಿ ಮನುಷ್ಯನಿಗೆ ಸಹಜವಾದ್ದು ಮತ್ತು ಸ್ವಂತದ್ದು. ಸಾಮಾಜಿಕ ಮೌಲ್ಯಗಳ ಪ್ರತಿಬಿಂಬವಾಗಿ ತನ್ನ ಆಶಯಗಳನ್ನು ರೂಪಿಸಿಕೊಳ್ಳಲು ವ್ಯಕ್ತಿ ಇಷ್ಟಪಡದಿದ್ದಾಗ ಆತನ ಮನಸ್ಸು ಇಷ್ಟು ಮಾತ್ರ ಬಹಿರ್ಮುಖವಾಗಿ ಇರಬಲ್ಲದು. ಹೀಗಿರುತ್ತ, ಇಲ್ಲಿ ಋಷಿ ಕೈಗೊಳ್ಳುವ –

''ಸತ್ಯದಿಂದ ಪ್ರೇರಣೆ ಪಡೆದ ಮಾತು ಮತ್ತು
ಅಧ್ಯಯನ-ಅಧ್ಯಾಪನ, ತಪ ಮತ್ತು ಅಧ್ಯಯನ
- ಅಧ್ಯಾಪನ, ಇಂದ್ರಿಯ ಸಂಯಮ ಮತ್ತು ಅಧ್ಯಯನ
– ಅಧ್ಯಾಪನ, ಮನೋನಿಗ್ರಹ ಮತ್ತು ಅಧ್ಯಯನ
– ಅಧ್ಯಾಪನ, ಅಗ್ನಿಪೂಜೆ ಮತ್ತು ಅಧ್ಯಯನ
– ಅಧ್ಯಾಪನ, ಅತಿಥಿಪೂಜೆ ಮತ್ತು ಅಧ್ಯಯನ
– ಅಧ್ಯಾಪನ, ಕೌಟುಂಬಿಕ ಬದುಕು ಮತ್ತು
ಅಧ್ಯಯನ-ಅಧ್ಯಾಪನ''

ಈ ಮೊದಲಾದ ಕ್ರಿಯೆಗಳೆಲ್ಲ ತನಗಾಗಿ, ತನ್ನ ಸುಖಕ್ಕಾಗಿ ಮಾತ್ರ ನಡೆಯಬೇಕಾಗಿದೆ.

ತನ್ನ ನಡೆ-ನುಡಿಗಳಿಂದ ತಾನು ತೃಪ್ತಿ ಪಡೆಯಬೇಕು, ಅದರಿಂದ ತನಗೆ ನೆಮ್ಮದಿ ಉಂಟಾಗಬೇಕು; ಸಜ್ಜನಿಕೆಯ ನಡತೆ ಅನಿವಾರ್ಯವಾಗಿರುವುದು ಮತ್ತೊಬ್ಬನನ್ನು ಪ್ರಸನ್ನಗೊಳಿಸುವುದಕ್ಕಲ್ಲ; ಅದು ತನ್ನ ಉಲ್ಲಾಸಕ್ಕಾಗಿ ತೈತ್ತಿರೀಯದ ಈ ಆಗ್ರಹ ನಮ್ಮ ವರ್ತನೆಗೆ ಹೊಸ ದಿಕ್ಕನ್ನು ತೋರಿಸಿ ಕೊಡುತ್ತದೆ. ಈ ಧೋರಣೆ ಇನ್ನೂ ಸ್ಪಷ್ಟವಾಗುವುದು ವೇದಾಧ್ಯಯನ ಮುಗಿಸಿ ತನ್ನ ಊರಿಗೆ ಹೊರಟು ನಿಂತ ಶಿಷ್ಯನಿಗೆ ಆಚಾರ್ಯ ನೀಡುವ ಉಪದೇಶದಲ್ಲಿ :

**''ಸತ್ಯಂ ವದ, ಧರ್ಮಂ ಚರ – ಸತ್ಯವನ್ನು ನುಡಿ,**

ಧರ್ಮದಂತೆ ನಡೆ, ಓದು, ಆಚಾರ್ಯನಿಗೆ ಪ್ರಿಯವಾದ ಧನವನ್ನು ತಂದು ಒಪ್ಪಿಸು; ವಂಶವನ್ನು ಮುಂದುವರೆಸದೆ ಇರಬೇಡ, ಸತ್ಯವನ್ನು ಮೀರಬೇಡ, ಧರ್ಮವನ್ನು ದಾಟಬೇಡ, ನಿನ್ನ ಹಿತಸಾಧನೆ ಮಾಡಿಕೊ, ಐಶ್ವರ್ಯವನ್ನು ಸಂಪಾದಿಸು. ಅಧ್ಯಯನ-ಅಧ್ಯಾಪನಗಳನ್ನು ಮಾತ್ರ ಎಂದೂ ನಿಲ್ಲಿಸಬೇಡ; ದೇವ ಪಿತೃಕಾರ್ಯಗಳನ್ನು ಬಿಡಬೇಡ.''

''ತಾಯಿ ದೇವರು, ತಂದೆ ದೇವರು, ಗುರು ದೇವರು, ಅತಿಥಿ ದೇವರು.''

''ಒಳ್ಳೆಯ ಕೆಲಸಗಳನ್ನೇ ಮಾಡು. ಅದಲ್ಲದ್ದನ್ನು ಮುಟ್ಟಬೇಡ. ಹಿರಿಯರ ಒಳ್ಳೆಯ ಕೆಲಸಗಳನ್ನು ಮುಂದುವರಿಸಿ ಕೊಂಡು ಹೋಗು, ಉಳಿದವನ್ನಲ್ಲ. ನಮಗಿಂತ ಶ್ರೇಷ್ಠರಾದ ಜ್ಞಾನಿಗಳಲ್ಲಿ ನಂಬುಗೆಯಿರಲಿ. ಆದರದಿಂದ ದಾನಮಾಡು; ವಿನಯದಿಂದ ದಾನಮಾಡು; ಭಯದಿಂದ ದಾನಮಾಡಬೇಡ; ತಿಳಿದು ದಾನಮಾಡು. ಸಂಶಯ ಬಂದಾಗ, ಅಂತಹ ಸಂದರ್ಭಗಳಲ್ಲಿ ಸಮರ್ಥರಾದ ಹಿರಿಯರು ಹೇಗೆ ನಡೆದು ಕೊಂಡರೋ ಅದೇ ರೀತಿ ನೀನೂ ನಡೆ.''

''ಇದೇ ಉಪದೇಶ. ಇದೇ ವೇದಜ್ಞಾನ. ಇದೇ ಉಪಾಸನೆ.'' – *(ತೈತ್ತಿರೀಯದ ಶಿಕ್ಷಾವಲ್ಲಿ)*

ಈ ಉಪದೇಶವು ಈಗಾಗಲೇ ಸಾವಿರಾರು ವರ್ಷಗಳಿಂದ ನಮ್ಮ ಸಂವೇದನೆಯ ಒಂದಂಶವಾಗಿ, ನಮ್ಮ ವರ್ತನೆಯಲ್ಲಿ ಅಡಕವಾಗಿ ಉಳಿದುಕೊಂಡಿದೆ. ಮನುಷ್ಯನನ್ನು ಬಾಧಿಸಬಹುದಾದ ಯಾವುದೇ ಸಾಮಾಜಿಕ ಅಭಿಪ್ರಾಯಗಳಿಗೂ ಇಲ್ಲಿ ಮಣೆ ಹಾಕದೆ, ಕಣ್ಣು ಕೋರೈಸುವ ಆದರ್ಶಗಳಿಗೆ ಗುಲಾಮನಾಗದೆ, ಅವನ ಸದ್ಗುಣಗಳ ಒಟ್ಟಂದದಲ್ಲಿ ಬದುಕು ಸಾಗುವ ಹೊಸ ದಾರಿಯ ಉಪದೇಶ ಮಾಡಲಾಗಿದೆ. ಎಲ್ಲವೂ ತನ್ನೊಳಗೆ ಸಫಲವಾಗಬೇಕು; ಸಫಲವಾಗುವ ಸಾಧ್ಯತೆ ಹೆಚ್ಚಿದಾಗಲೇ ತನ್ನ ಸ್ವಾತಂತ್ರ್ಯದ ಸಾಧ್ಯತೆಯೂ ಹೆಚ್ಚುತ್ತದೆ ಎನ್ನುವ ಗ್ರಹಿಕೆ ಇದು.

ಹೀಗಿರುತ್ತ, ಮೋಕ್ಷ ಪ್ರಾಪ್ತಿಯಾಗಲೀ, ಪರಲೋಕವಾಗಲೀ ತೈತ್ತಿರೀಯ ದಲ್ಲಿ ಜಿಜ್ಞಾಸೆಯ ವಿಷಯವಲ್ಲ. ಸ್ವಚ್ಛಂದತೆಯಿಲ್ಲದ ಐಹಿಕ ಸುಖ ಇದರ ವಸ್ತು. ದೇವರು ಸಹ ತೈತ್ತಿರೀಯದಲ್ಲಿ ವಸ್ತುವಲ್ಲ, ಜೀವನಶ್ರದ್ಧೆಯಿಂದ ಪ್ರಕಟವಾಗುವ ಸುಖ ಇಲ್ಲಿಯ ವಸ್ತು. ಹಾಗೆ ನೋಡಿದರೆ, ಜೀವನ ಶ್ರದ್ಧೆಗೆ

ಅಡ್ಡಿಯಾಗಿ ವಿರಕ್ತಿವೇದಾಂತವನ್ನು ಉತ್ಕಟಸ್ಥಿತಿಗೆ ತಂದು ನಿಲ್ಲಿಸುವ ಕಠೋಪನಿಷತ್ತನ್ನು ಈ ಉಪನಿಷತ್ತು ತಡೆದು ನಿಲ್ಲಿಸುತ್ತದೆ.

* * *

ದೇವರ ಭೀತಿ ಅಥವಾ ದೇವರಿಲ್ಲದ ಭೀತಿಯಿಂದ ತೈತ್ತಿರೀಯೋಪನಿಷತ್ತಿನ ಋಷಿ ಬಿಡುಗಡೆ ಪಡೆಯುತ್ತಾನೆ ಎಂದು ಈ ಮೊದಲು ನಾನು ಹೇಳಿದ್ದೆ. ಮುಂದುವರೆದು ಹೇಳುವುದಾದರೆ ಈ ಉಪನಿಷತ್ತು ನಂಬುವ ಮೌಲ್ಯ ಪ್ರಪಂಚ ತುಂಬ ವಿಶಿಷ್ಟವಾದುದು. ತನ್ನ ಆಕಾಂಕ್ಷೆಯನ್ನೇ ತೀವ್ರವಾಗಿ ತೆಗೆದುಕೊಳ್ಳುವ ಭೌತಿಕವಾದದಿಂದಾಗಲೀ ಆಧ್ಯಾತ್ಮಿಕತೆಯಲ್ಲಿ ಮುಳುಗಿರುವ ಮುಚ್ಚಿದ ಮನಸ್ಸಿನಿಂದಾಗಲೀ ಪಡೆಯಲು ಸಾಧ್ಯವಾದ ಮುಕ್ತಮನದ ಆನಂದ ಸ್ಥಿತಿ ಇದರ ವೈಶಿಷ್ಟ್ಯ. ಬುದ್ಧಿಯನ್ನು ಹಚ್ಚಿ ಪರೀಕ್ಷಿಸಿ ಕೊನೆಗೆ ಭಾವನಾತ್ಮಕವಾಗಿ ಸಾಕ್ಷಾತ್ಕರಿಸಿಕೊಳ್ಳುವ ಜೀವನದೃಷ್ಟಿ ಎಂದು ಇದನ್ನು ಕರೆಯಬಹುದು.

ಅಂದಮಾತ್ರಕ್ಕೆ, ತೈತ್ತಿರೀಯದ ಧೋರಣೆಯಲ್ಲಿ ನಾಸ್ತಿಕತೆಯ ಉದ್ದಂಡತನವಿಲ್ಲ; ಸ್ವರ್ಗವನ್ನು ಹುಡುಕುತ್ತ ಕೂರುವುದಾಗಲೀ ಜೀವನವನ್ನು ದೇವರಿಗೆ ಸಮರ್ಪಣಭಾವದಿಂದ ಒಡ್ಡಿಕೊಳ್ಳುವುದಾಗಲೀ ಇಲ್ಲಿಲ್ಲ. ಆದರೆ ಪರಮಾತ್ಮನ ಕುರಿತು ಅರಿವನ್ನು ಸಂಪಾದಿಸುವುದು ತಪ್ಪಲ್ಲ. ಹಾಗೂ, ಈ ಅರಿವು ಪರಿಪೂರ್ಣತೆಗಾಗಿ ಮಾತ್ರ. ಅರಿವನ್ನು ತಲುಪುವ ಕ್ರಮಣವೂ ಸಹ ಪೂರ್ಣಾವಸ್ಥೆಯೇ ಆಗಿರುವುದರಿಂದ ತೈತ್ತಿರೀಯದ ಅರಿಯುವ ಆಸಕ್ತಿಯಲ್ಲಿ ಅವಸರವಿಲ್ಲ. ಏಕೆಂದರೆ, ನಮ್ಮ ಅರಿವು ಅಥವಾ ಮೌಢ್ಯದಿಂದ ಸತ್ಯದ ಅಥವಾ ಪರಮಾತ್ಮನ ಸ್ವರೂಪದಲ್ಲಿ ಯಾವ ಬದಲಾವಣೆಯೂ ಆಗದು. ಆದ್ದರಿಂದ ತಿಳಿಯಬೇಕಾದದ್ದು ಇಷ್ಟೇ :

> ''ಈ ಪುರುಷನಲ್ಲಿರುವವನೂ ಆ ಸೂರ್ಯನಲ್ಲಿ ಇರುವವನೂ ಒಬ್ಬನೇ. ಇದನ್ನು ಅರಿತವನು ಈ ಲೋಕದಿಂದ ಹೊರಟು ಅನ್ನಪ್ರಧಾನ ಅವಸ್ಥೆಯನ್ನು ದಾಟಿ ಪ್ರಾಣಮಯ ಅವಸ್ಥೆಯನ್ನೂ ದಾಟಿ ವಿಜ್ಞಾನಮಯ (ಶುದ್ಧವಾದ ಬೌದ್ಧಿಕ ಸ್ಥಿತಿ) ಅವಸ್ಥೆಯನ್ನೂ ದಾಟಿ ಆನಂದಮಯ ಅವಸ್ಥೆಯನ್ನೂ ದಾಟಿ ನಿಲ್ಲುತ್ತಾನೆ.''
>
> ''ಮಾತು ಮತ್ತು ಮನಸ್ಸಿಗೆ ನಿಲುಕದ ಬ್ರಹ್ಮನನ್ನು ಆನಂದಾವಸ್ಥೆಯಲ್ಲಿ ತಿಳಿದ ಮನುಷ್ಯನು ಧೀರನು. ಅದು ಎಷ್ಟು

ಪರಿಪಾಕಗೊಂಡ ಸ್ಥಿತಿಯೆಂದರೆ ಒಳಿತು ಮತ್ತು ಪಾಪದ ಲೇಪ ಅವನಿಗೆ ಇರುವುದಿಲ್ಲ. ಅವನು ಜ್ಞಾನಿ. ಅವನಿಗೆ ಎಲ್ಲವೂ ಆತ್ಮರೂಪವಾಗಿ ತೋರುತ್ತದೆ.''

– ಎನ್ನುತ್ತಾನೆ ತೈತ್ತಿರೀಯದ ಋಷಿ. ಕಠೋಪನಿಷತ್ತಿನಲ್ಲಿ ಕಾಣುವ ದೇವರ ಭೀತಿಯಾಗಲೀ ದೇವರಿಲ್ಲವೆಂದು ನಂಬಬೇಕಾಗಿ ಬಂದ ವ್ಯಕ್ತಿಯ ವಿವಶತೆಯಾಗಲೀ ಇಲ್ಲಿ ಕಾಣುವುದಿಲ್ಲ.

ಆದರೆ ಉಪನಿಷತ್ತಿನ ಕಸುಬು ಮನುಷ್ಯನ ಜಿಜ್ಞಾಸೆಗೆ ಕಲ್ಲು ಹಾಕುವುದಲ್ಲ. ಪ್ರಯೋಜನಕ್ಕಾಗಿ ಲೌಕಿಕ ಜ್ಞಾನ ಹುಟ್ಟಿದ್ದರೆ ನೆಮ್ಮದಿಗಾಗಿ ಉಪನಿಷತ್ತು ರಚನೆಗೊಂಡಿರುತ್ತದೆ. ನಮ್ಮ ದಿನಚರ್ಯೆಯೊಳಗಿನ ವಿವರಗಳನ್ನು ಬರಿಯ ಮಾಯೆಯೆಂದು ಪಕ್ಕಕ್ಕೆ ತಳ್ಳಿಬಿಡುವುದು ಉಪನಿಷತ್ತುಗಳ ಆಧ್ಯಾತ್ಮಿಕ ಚಿಂತನೆಗೆ ಹೇಗೆ ಸಾಧ್ಯವಾಗಿದೆ ಎನ್ನುವುದನ್ನು ಅನೇಕ ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಆದರೆ ತೈತ್ತಿರೀಯವು ಮಾತ್ರ ದೈನಂದಿನ ಕಾಯಕದಿಂದ ಸಿಗುವ ನೆಮ್ಮದಿಯನ್ನು ಮೃಗಜಲವೆಂದು ಭಾವಿಸುವುದಿಲ್ಲ. ಇಂತಹ ನೆಮ್ಮದಿ ಲೌಕಿಕವಾಗಿ ವಾಸ್ತವಿಕವಾದುದು, ಭೌತಿಕವಾಗಿ ನಿಜವಾದುದು, ಹಾಗೂ ತೈತ್ತಿರೀಯದ ಪ್ರಕಾರ ಸ್ವಯಂಭುವಾದುದು. ಆದುದರಿಂದ ಈ ಉಪನಿಷತ್ತಿನ ದೃಷ್ಟಿಯಲ್ಲಿ ನೆಮ್ಮದಿಯ ಸ್ಥಾಯೀಭಾವವಾದ ಆನಂದಮಯ ಅವಸ್ಥೆಗೆ ತಲುಪಿ ನಿಲ್ಲುವುದರಿಂದ ಮನುಷ್ಯನ ಸ್ಥಿತಿ ಗಟ್ಟಿಗೊಳ್ಳುತ್ತದೆ. ಇದನ್ನು ಬದುಕಿನೊಳಗೇ ಹುಡುಕಿಕೊಳ್ಳಬೇಕೆನ್ನುವುದು ತೈತ್ತಿರೀಯದ ಮತ.

ಈ ಮೊದಲೇ ಹೇಳಿದಂತೆ, ಬುದ್ಧಿಯನ್ನು ಹಚ್ಚಿ ಪರೀಕ್ಷಿಸಿ ಕೊನೆಗೆ ಭಾವನೆಯ ರೂಪದಲ್ಲಿ ಅನುಭವಿಸುವುದು ಆನಂದದ ಅವಸ್ಥೆ. ತೈತ್ತಿರೀಯದ ಋಷಿಯ ನಿಲುವಿನಲ್ಲಿ ಆಧ್ಯಾತ್ಮಿಕ ಚಿಂತನೆಯೊಂದು ಇದೆ ಎನ್ನುವುದಾದರೆ ಅದು ಇದೇ. ಆದರೆ ಈ ಆಧ್ಯಾತ್ಮಿಕ ಅನುಭವವನ್ನು ಇಂದ್ರಿಯ ಮೂಲದಿಂದ ಅರಿಯಲಾಗದ ಯಾವ ಶಕ್ತಿಯೂ ತಂದುಕೊಡಲಾರದು. ಹೀಗೆ ಬುದ್ಧಿ ಮತ್ತು ಅನುಭವಗಳಿಂದ ಮನುಷ್ಯ ಸಾಧಿಸುವ ಆನಂದವನ್ನು ಒಂದು ಸರಳ ಕಥಾನಕದ ನೆರವಿನಿಂದ ಈ ಉಪನಿಷತ್ತು ನಿರೂಪಿಸುತ್ತದೆ:

''ಭೃಗು ತನ್ನ ತಂದೆ ವರುಣಋಷಿಯ ಬಳಿಗೆ ಬಂದು ತನಗೆ ಬ್ರಹ್ಮವನ್ನು ಉಪದೇಶಿಸಬೇಕೆಂದು ವಿನಂತಿಸಿಕೊಂಡನು. ಅದಕ್ಕೆ ವರುಣ ಹೇಳಿದನು – ಅನ್ನ, ಪ್ರಾಣ, ಚಕ್ಷು, ಶ್ರೋತ್ರ ಮತ್ತು ಮನಸ್ಸು, ಮತ್ತು ಮಾತು ಎಲ್ಲಿಂದ ಹುಟ್ಟುವವೋ, ಯಾತರ

ಆಧಾರದಿಂದ ಜೀವಿಸುವವೋ, ಯಾತರಲ್ಲಿ ಲಯವಾಗುವವೋ, ಅದನ್ನು ಅರಿತು ಬಾ. ಅದೇ ಬ್ರಹ್ಮ.''

''ಭೃಗು ಅದನ್ನೇ ಚಿಂತಿಸಿ ಧ್ಯಾನಿಸಿ ಕೊನೆಗೆ ಅನ್ನವು ಬ್ರಹ್ಮ ಎನ್ನುವ ತೀರ್ಮಾನಕ್ಕೆ ಬಂದನು. ಏಕೆಂದರೆ ಅನ್ನದಿಂದಲೆ ಎಲ್ಲವೂ ಉತ್ಪನ್ನವಾಗುತ್ತವೆ, ಅನ್ನದ ಆಧಾರದಿಂದ ಬದುಕುತ್ತವೆ, ಅನ್ನದ ಕಡೆಗೆ ಕ್ರಮಿಸುತ್ತ ಕೊನೆಗೆ ಅದರೊಳಗೆ ಲಯವಾಗುತ್ತವೆ. ಆದರೆ ಈ ಅರಿವಿನಿಂದ ಅವನಿಗೆ ತೃಪ್ತಿ ಸಿಗಲಿಲ್ಲ. ಮತ್ತೆ ಅವನ ಸಂದೇಹ ಹೆಚ್ಚಾಯಿತು. ಅದನ್ನು ತಂದೆಯಲ್ಲಿ ಅರಿಕೆಮಾಡಿ ಕೊಂಡಾಗ ಅವನು 'ಮತ್ತೆ ಯೋಚಿಸು ಧ್ಯಾನಿಸು' ಎಂದ ಮೇಲೆ ಪುನಃ ಚಿಂತನೆ ನಡೆಸಿದನು, ಧ್ಯಾನಿಸಿದನು; ಕೊನೆಗೆ ಪ್ರಾಣವೇ ಬ್ರಹ್ಮ ಎನ್ನುವ ತೀರ್ಮಾನಕ್ಕೆ ಬಂದನು. ಏಕೆಂದರೆ ಪ್ರಾಣ ಎಲ್ಲಕ್ಕಿಂತ ಮಿಗಿಲಾದುದು; ಎಲ್ಲವೂ ಪ್ರಾಣದಿಂದ ಬದುಕುತ್ತವೆ, ಪ್ರಾಣದಲ್ಲಿ ಲಯವಾಗುತ್ತವೆ. ಸ್ವಲ್ಪ ಕಾಲದ ನಂತರ ಈ ತೀರ್ಮಾನದ ಬಗೆಗೆ ಕೂಡ ಅವನಿಗೆ ಸಂದೇಹ ತಲೆದೋರಿತು. ಮತ್ತೆ ತಂದೆಯ ಸಲಹೆ ಪಡೆದು ಚಿಂತನೆ ನಡೆಸಿ ಧ್ಯಾನಿಸಿ ಕೊನೆಗೆ ಮನಸ್ಸೇ ಬ್ರಹ್ಮ ಎಂದು ತೀರ್ಮಾನಿಸಿದನು. ಏಕೆಂದರೆ, ಎಲ್ಲವೂ ಮನಸ್ಸಿನಲ್ಲಿಯೇ ಕಾಣಿಸುತ್ತವೆ; ಹೀಗೆ ಕಾಣಿಸಿಕೊಂಡವುಗಳೆಲ್ಲ ಮನೋಬಲದಿಂದ ಬದುಕುತ್ತವೆ, ಮನಸ್ಸನ್ನೇ ಅನುಸರಿಸುತ್ತ ಕೊನೆಗೆ ಅದರೊಳಗೆ ಲಯವಾಗುತ್ತವೆ. ಈ ಅರಿವು ಭೃಗುವಿಗೆ ತೃಪ್ತಿಯನ್ನು ತಂದುಕೊಟ್ಟಿತು; ತನ್ನ ಸಂದೇಹಗಳು ದೂರವಾದವು ಎಂದು ಸಮಾಧಾನಗೊಂಡನು. ಆದರೆ ಸ್ವಲ್ಪ ಸಮಯದಲ್ಲಿ ಅಲ್ಲಿ ಕೂಡ ಅವನಿಗೆ ಅನುಮಾನ ಶುರುವಾಯಿತು. ''ಹಾಗಾದರೆ ಮನಸ್ಸು ಕೂಡ ಬ್ರಹ್ಮವಲ್ಲ! ಮನಸ್ಸಿಲ್ಲದಿದ್ದರೆ ಮತ್ತಾವುದನ್ನು ಬ್ರಹ್ಮವೆಂದು ತಿಳಿಯಬೇಕು!'' ಚಿಂತೆಯಿಂದ ಜಡನಾಗಿ ತಂದೆಯ ಬಳಿಗೆ ಹೋಗಿ ಅದನ್ನು ಹೇಳಿಕೊಂಡನು. 'ಹೋಗು, ಮತ್ತೆ ಚಿಂತಿಸು, ಧ್ಯಾನಿಸು' ಎಂದು ವರುಣನು ನಿರ್ಮಮನಾಗಿ ಆದೇಶಿಸಿದನು. ಈ ಬಾರಿ ಭೃಗುವಿಗೆ ಬುದ್ಧಿಯೇ ಬ್ರಹ್ಮವೆಂದು ತೋರಿತು. ಏಕೆಂದರೆ ಹುಟ್ಟಿ ಬರಲು ಬಾಳಲು ಮತ್ತು ಲಯಗೊಳ್ಳಲು ಬುದ್ಧಿಯೇ ಕಾರಣ. ಆದರೆ ಈ ಸಮಾಧಾನ ಕೂಡ ಅವನ ಸಂದೇಹಗಳನ್ನು ಪೂರ್ತಿ ನಿವಾರಿಸಲಿಲ್ಲ. ಪುನಃ

ತಂದೆಯ ನಲಹೆಯಂತೆ ಚಿಂತಿಸಿ ಧ್ಯಾನಿಸಿ ಕೊನೆಗೆ ಆನಂದವೇ ಬ್ರಹ್ಮ ಎನ್ನುವ ನಿರ್ಣಯಕ್ಕೆ ಬಂದನು. ಏಕೆಂದರೆ ಎಲ್ಲವೂ ಆನಂದಜನ್ಯ. ಬಾಳು ಸಾಗುವುದು ಆನಂದದಿಂದ ಮಾತ್ರ. ಕೊನೆಗೆ ಆನಂದವನ್ನು ಕಾಣಲು ಹೋರಾಡುತ್ತ ಎಲ್ಲವೂ ಆನಂದದೊಳಗೇ ಲಯಗೊಳ್ಳುತ್ತವೆ. ಆನಂದದ ತತ್ವವನ್ನು ಅರಿತು ಕಂಡಾಗ ಭೃಗುವಿಗೆ ನಮಾಧಾನ ಸಿಕ್ಕಿತು. ಅವನ ಸಂದೇಹಗಳೆಲ್ಲ ನಿವಾರಣೆಗೊಂಡವು.''

ಇದು ತೈತ್ತಿರೀಯ ಹೇಳಿದ ಕತೆ. ಈ ಕತೆ ಎಷ್ಟನ್ನು ಯೋಚಿಸಿದೆಯೋ ಅದಷ್ಟೇ ಇದರ ಪ್ರಪಂಚ. ಉಳಿದ ಉಪನಿಷತ್ತುಗಳು ನಡೆಸುವ ವಿಶ್ವದ ಸೃಷ್ಟಿ, ಸ್ಥಿತಿ, ಲಯಗಳ ಜಿಜ್ಞಾಸೆ ಇದಕ್ಕಿಲ್ಲ. ತನಗಿಂತ ಹೊರಗೆ ಕಾಡುವ ಹಗೆಗಳಿಲ್ಲ, ತನಗಿಂತ ಹೊರಗೆ ಗೆಳೆಯರಿಲ್ಲ, ತನಗಿಂತ ಹೊರಗೆ ವಿದ್ಯೆಯಿಲ್ಲ. ಈ ಶರೀರ ದೊಳಗಿನ ಬುದ್ಧಿ, ಪ್ರಾಣ, ಮನಸ್ಸು ಹಾಗೂ, ಅನ್ನ ಎನ್ನುವ ಕೋಶಗಳೇ ಇದರ ಪ್ರಪಂಚ. ಈ ಸಂದರ್ಭದಲ್ಲಿ ತೈತ್ತಿರೀಯವು ಹೇಳುವ ''ಆನಂದೋ ಬ್ರಹ್ಮೇತಿ ವ್ಯಜಾನಾತ್'' ಎಂಬ ಮಾತು ವೇದಾಂತದರ್ಶನದ ಬಹಳ ಮುಖ್ಯವಾದ ನಿಲುವಾಗಿದೆ. ಆನಂದವೇ ಬ್ರಹ್ಮ ಎನ್ನುವ ಅರಿವು ಉಪನಿಷದ್ವಿದ್ಯೆಯಿಂದ ಸಿಗುವ ನಿಜವಾದ ಅನುಭವ; ನಿಜವಾದ ಸುಖ ಅದೇ. ಅಂದಮಾತ್ರಕ್ಕೆ ತೈತ್ತಿರೀಯದ ಈ ಜೀವನದೃಷ್ಟಿ ಮೂಲತಃ ಆಧ್ಯಾತ್ಮಿಕವಾದದ್ದು ಮತ್ತು ಪಾರಲೌಕಿಕವಾದುದು ಎಂದು ತಪ್ಪುಗ್ರಹಿಕೆಗೆ ಬರಲಾಗದು. ತೈತ್ತಿರೀಯ ಹೇಳುವುದು ಬ್ರಹ್ಮಾನಂದವನ್ನಲ್ಲ, ಈ ಲೋಕದಲ್ಲಿ ಶ್ರೇಷ್ಠವಾದ ಆನಂದ; ಅದು ವಿಶೇಷವಾದ ತೃಪ್ತ ಸ್ಥಿತಿ; ಅದೇ ಬ್ರಹ್ಮ ಈ ಋಷಿಗೆ.

ತೈತ್ತಿರೀಯದಲ್ಲಿ ಅನ್ನ, ಪ್ರಾಣ, ಮನಸ್ಸು, ಬುದ್ಧಿ ಹಾಗೂ ಆನಂದ ಈ ಐದನ್ನು ಕೋಶಗಳು ಎಂದು ವರ್ಣಿಸಲಾಗಿದೆ. ಅತ್ಯಂತ ಹೊರಗಿನ ಹಾಗೂ ಸ್ಥೂಲ ಗ್ರಹಿಕೆಗೆ ಸಿಗುವ ಅನ್ನವೇ ನಿಜವಾದ ಮನುಷ್ಯಕೋಶ ಎಂದು ಭೃಗು ತಿಳಿಯುತ್ತಾನೆ. ಇದು ಸ್ಥೂಲದೃಷ್ಟಿಯ ಯೋಚನೆಗೆ ಸರಿ. ಆದರೆ ಮನುಷ್ಯ ಅನ್ನಮಯ ಕೋಶವಷ್ಟೇ ಅಲ್ಲ. ಅವನು ಬರಿಯ ಪ್ರಾಣ ಮನಸ್ಸು ಬುದ್ಧಿಯೂ ಅಲ್ಲ. ಅವನು ಆನಂದಮಯ. ಅದರ ಅನಾವರಣ ಮನುಷ್ಯನ ಗುರಿ. ಮನುಷ್ಯನ ಮೂಲಸ್ಥಿತಿಯನ್ನು ನಿರ್ಮಿಸುವ, ನಿಯಂತ್ರಿಸುವ ಕೋಶ ಆನಂದ. ಈ ಐದು ಕೋಶಗಳು ಕ್ರಮವಾಗಿ ಒಂದಕ್ಕಿಂತ ಒಂದು ಒಳಗಿನವು, ಮತ್ತು ಹೆಚ್ಚು ಹೆಚ್ಚು ನಿಜವಾದವು. ಇವುಗಳಲ್ಲಿ ಪ್ರತಿಯೊಂದೂ ನಿಜವಾದ ಅವಸ್ಥೆ ಮತ್ತು ಪೂರ್ಣಾವಸ್ಥೆ. ಇದನ್ನು ಪ್ರತಿಪಾದಿಸುತ್ತ ತೈತ್ತಿರಿಯೋಪನಿಷತ್ತು

ಹೇಳುವ ಈ ಮಾತುಗಳು ಚೇತೋಹಾರಿಯಾಗಿವೆ :

"ಅನ್ನಂ ನ ನಿಂದ್ಯಾತ್"
"ಅನ್ನಂ ನ ಪರಿಚಕ್ಷೀತ"
"ಅನ್ನಂ ಬಹುಕುರ್ವೀತ"

– ಅನ್ನವನ್ನು ನಿಂದಿಸಬಾರದು, ಅನ್ನವನ್ನು ಹೀಗಳೆಯಬಾರದು, ಅನ್ನ ವೃದ್ಧಿಯಾಗುವಂತೆ ನೋಡಿಕೊಳ್ಳಬೇಕು. ಇದು ಈ ಲೋಕದ ವ್ರತವಾಗಬೇಕು. ಆತ್ಮಶುದ್ಧಿಯ ಬೆಳಕಿನಲ್ಲಿ ಉಜ್ವಲವಾಗಿ ಕಾಣುವ ತೈತ್ತಿರೀಯದ ಈ ಜೀವನ ಸಿದ್ಧಾಂತ ಮುಖ್ಯವಾಗಿ ನಮ್ಮ ಪರವಾಗಿದೆ, ಬದುಕಿನ ಬಗ್ಗೆ ಆಸ್ಥೆ ವಹಿಸಿದೆ ಎಂದು ನಾನು ತಿಳಿಯಲು ಇದೇ ಕಾರಣ. ಹೀಗೆ ಈ ಉಪನಿಷತ್ತಿನಲ್ಲಿ ತನ್ನ ಉನ್ನತಿಗೆ, ತನ್ನ ಪರಿಪೂರ್ಣತೆಗೆ, ನೈತಿಕ ಜೀವನದ ಜೋಪಾಸನೆಗೆ ಮತ್ತು ಬಾಹ್ಯ ಆಸಕ್ತಿಗಳಿಂದ ಮುಕ್ತವಾದ ತನ್ಮಯತೆಗೆ ಹೆಚ್ಚಿನ ಗಮನ ಕಾಣುತ್ತದೆ.

* * *

ಈ ನನ್ನ ಪರಿಶೀಲನೆ ಮುಗಿಯಲು ಇನ್ನೂ ಒಂದು ಮಾತನ್ನು ದಾಖಲೆ ಮಾಡಿಕೊಳ್ಳುವುದು ಅನಿವಾರ್ಯವಾಗಿದೆ. ಚಿಂತನೆಯ ಮತ್ತು ಸಂವೇದನೆಯ ದೃಷ್ಟಿಯಿಂದ ತೈತ್ತಿರೀಯದ ಮನೋಧರ್ಮಕ್ಕೂ ಅದಕ್ಕೂ ಹಿಂದಿನ ಕಠ, ಮುಂಡಕ, ಮಾಂಡೂಕ್ಯೋಪನಿಷತ್ತುಗಳ ಮನೋಧರ್ಮಕ್ಕೂ ನಡುವೆ ನಾಕಷ್ಟು ಅಂತರ ಕಾಣುತ್ತದೆ. ಪರಮಾತ್ಮನ ಚಿಂತನೆಯನ್ನು ಮಾಡುತ್ತಲೇ ಅದನ್ನು ಮುಖ್ಯವಲ್ಲ ಎನ್ನುವುದು, ತನ್ನ ಲೌಕಿಕ ಏಳ್ಗೆಯ ಬಗೆಗೆ ಹೇಳಿ ಕೊಳ್ಳುತ್ತಲೆ ಅದಕ್ಕೊಂದು ನೈತಿಕ ಸ್ವರೂಪವನ್ನು ಒದಗಿಸುವುದು, ಆದರೆ ಜೀವನದ ಅರ್ಥವಂತಿಕೆಯೇನಿದ್ದರೂ ಅದು ಆನಂದಜನ್ಯ ಎನ್ನುವುದು – ಹೀಗೆ ತೈತ್ತಿರೀಯದಲ್ಲಿ ಬದಲಾಗುವ ನಿಲುವನ್ನು ಪಟ್ಟಿ ಮಾಡಬಹುದು. ಈ ಅಂತರವನ್ನು ತೈತ್ತಿರೀಯದ ವಿನ್ಯಾಸದಲ್ಲಿ ಸಹ ಗಮನಿಸುತ್ತೇವೆ.

ಆದರೂ ಒಂದು ವಿಷಯ ಸ್ಪಷ್ಟವಾಗುತ್ತದೆ. ತೈತ್ತಿರೀಯದ ಚಿಂತನೆಯಲ್ಲಿ ಸ್ವಚ್ಛಂದತೆಗೆ ಆದ್ಯತೆಯನ್ನು ನೀಡಿದಂತೆ ತೋರುತ್ತದೆ. ಇದರ ವೈಚಾರಿಕತೆಯಲ್ಲಿ ಏಕಸೂತ್ರತೆಯನ್ನು ಕಾಣಲು ಈ ಲೇಖನದಲ್ಲಿ ಯತ್ನಿಸಿದ ನಾನು ತೈತ್ತಿರೀಯದ ಇನ್ನೂ ಅನೇಕ ಉಪಸಂಗತಿಗಳನ್ನು ಕೈಬಿಡಬೇಕಾಯಿತು. ಈ ಉಪನಿಷತ್ತಿನಲ್ಲಿ ಅಧ್ಯಾತ್ಮವಾದದ ದೈತ್ಯ ಹೆಜ್ಜೆಗಳನ್ನು ಕಾಣುವ ಛಲವಾದಿಗಳು ನನ್ನ ಕ್ಷಮಾಯಾಚನೆಯನ್ನೇ ಟ್ರಂಪ್ ಮಾಡಿಕೊಳ್ಳಬಹುದು. ಆದರೆ

ತೈತ್ತಿರೀಯದ ಉದ್ದಗಲಗಳಲ್ಲಿ ಆಧ್ಯಾತ್ಮವಾದವನ್ನೇ ಕನಸಿ ಕೆದಕುವವರು ಮುಗ್ಗರಿಸಬೇಕಾಗುತ್ತದೆ. ಏಕೆಂದರೆ ತೈತ್ತಿರೀಯದಲ್ಲಿ ಅನೇಕ ದ್ವಂದ್ವಗಳ ನಡುವೆ ಮುಖ್ಯ ಸೆಳೆತವಿರುವುದು ಈ ಲೋಕದಲ್ಲಿ ಪಡೆಯಬೇಕಾದ ಸಫಲತೆಯ ಕಡೆಗೇ.

# ಐತರೇಯ ಉಪನಿಷತ್ತು : ಸೃಷ್ಟಿಯ ಪುರಾಣ

ಋಗ್ವೇದಕ್ಕೆ ಸೇರಿದ ಐತರೇಯ ಆರಣ್ಯಕದ ಒಂದು ಭಾಗ ಐತರೇಯ ಉಪನಿಷತ್ತು. ಈ ಆರಣ್ಯಕದ ನಾಲ್ಕನೆಯ ಐದನೆಯ ಮತ್ತು ಆರನೆಯ ಅಧ್ಯಾಯಗಳನ್ನು ಐತರೇಯ ಉಪನಿಷತ್ತು ಎಂದು ಕರೆಯುವ ರೂಢಿಯಿದೆ. ಇದರಲ್ಲಿ ಅಡಕವಾಗಿರುವ ದಿಗ್ಭ್ರಮೆಗೊಳಿಸುವ ನಿರಂಕುಶ ಚಿಂತನೆಯು ಕುತೂಹಲಕ್ಕೆ ಎಡೆಮಾಡಿಕೊಡುತ್ತದೆ. ''ಆತ್ಮಾವಾ ಇದಂ ಏಕ ಏವ ಅಗ್ರೇ ಆಸೀತ್'' – ಮೊಟ್ಟಮೊದಲು ಇದೆಲ್ಲ ಒಂದೇ ಒಂದು ಆತ್ಮವಾಗಿತ್ತು – ಎಂದು ಪ್ರತಿಪಾದಿಸುವ ಮೂಲಕ ಪ್ರಸಿದ್ಧಿಗೆ ಬಂದ ಐತರೇಯ ಉಪನಿಷತ್ತು ಸತ್ಯದ ಹೆಸರಿನಲ್ಲಿ ಆಣೆ ಮಾಡುತ್ತ ತನ್ನ ವಿಚಾರಗಳನ್ನು ನೇರವಾಗಿ ಮಳೆ ಸುರಿಯುವಂತೆ ಮಂಡಿಸತೊಡಗುತ್ತದೆ.

ಐತರೇಯವು ಋಗ್ವೇದಕ್ಕೆ ಪೂರಕ ಸಾಹಿತ್ಯ. ಆದರೂ ಋಗ್ವೇದದ ಕಾಲದ ಮನುಷ್ಯನ ಮುಗ್ಧ ಸ್ವಭಾವದಿಂದ ದೂರ ಸಾಗಿಬಂದು ನಿಲ್ಲುವ ಈ ಉಪನಿಷತ್ತಿನ ವಿಚಾರಧಾರೆಯು ಮನುಷ್ಯನು ಉಳಿಯುವ ಪ್ರಶ್ನೆಯೊಂದನ್ನೇ ದೊಡ್ಡದಾಗಿ ಕಾಣುತ್ತದೆ. ಉಳಿದ ಉಪನಿಷತ್ತುಗಳಲ್ಲಿ ಸಹಜವಾಗಿ ಕೆಲಸ ಮಾಡುವ ಕುತೂಹಲವಾಗಲೀ ಖುಶಿಯಾಗಲೀ ಅಥವಾ ತನ್ಮಯತೆಯಿಂದ ಮೂರ್ತಗೊಳ್ಳುವ ಅನುಭವವಾಗಲೀ ಐತರೇಯಕ್ಕೆ ಪ್ರೇರಣೆಯಲ್ಲ. ಹಾಗೆ ಹೇಳುವುದಾದರೆ, ಮುಖ್ಯ ಉಪನಿಷತ್ತುಗಳ ಸ್ಫೂರ್ತಿ ಮತ್ತು ಪರಂಪರೆಗಳೇ ಇಲ್ಲಿಲ್ಲ. ಆದರೂ ಐತರೇಯಕ್ಕೆ ಹಿಂದೂ ಸಂಪ್ರದಾಯದಲ್ಲಿ ಬಹುದೊಡ್ಡ ಮನ್ನಣೆಯಿದೆ. ಆಶ್ಚರ್ಯದ ಸಂಗತಿಯೆಂದರೆ ಮಾನವತಾವಾದದೊಡನೆ ಹೊಸೆದುಕೊಳ್ಳುತ್ತಾ ಸಮಾಜದಲ್ಲಿ ತನ್ನ ಇರವನ್ನು ಸಾರ್ಥಕಪಡಿಸಿ ಕೊಳ್ಳಬೇಕಾದ ಸಹಜಸ್ಥಿತಿಯಲ್ಲಿ ನಿಂತಿರುವ ಇಂದಿನ ಮನುಷ್ಯ ತನ್ನ ಅಂತರಂಗದಲ್ಲಿ ಯೋಚನೆಗಾಗಿ ಎತ್ತಿಕೊಳ್ಳಲೂ ಸಹ ಅಂಜುವ ಮನುಷ್ಯ ಕೇಂದ್ರಿತ ಸೃಷ್ಟಿವಾದವು ಐತರೇಯದ ವಸ್ತು. ಆಧ್ಯಾತ್ಮಿಕ ಚಿಂತನೆಯ ಹುರುಪಿನಲ್ಲಿ ಇಡೀ ವಿಶ್ವವನ್ನು ಮನುಷ್ಯನಿಗೆ ಬೇಕಾಬಿಟ್ಟಿಯಾಗಿ ನೀಡುವ ಈ ಉಪನಿಷತ್ತಿಗೆ ತನ್ನ ವಿಚಾರವಾದದ ಬಗ್ಗೆ ಕಿಂಚಿತ್ತೂ ಅನುಮಾನ-ಸಂಕೋಚಗಳು ತಲೆದೋರುವುದಿಲ್ಲ.

ಮೊದಲು ಇದೆಲ್ಲ ಒಂದೇ ಆತ್ಮವಾಗಿತ್ತು ಎಂದು ಸಾರುವ ಐತರೇಯದ ಒಟ್ಟೂ ಸಿದ್ಧಾಂತವೆಂದರೆ ಆತ್ಮದಿಂದ ಅಸಂಖ್ಯ ಜೀವಾತ್ಮಗಳೂ, ಜೀವಾತ್ಮಗಳ ಅನ್ನವಾಗಿ ಪ್ರಪಂಚದ ಸೃಷ್ಟಿಯೂ ಆಯಿತು. ಆಧ್ಯಾತ್ಮಿಕ ಅನುಭವದ ಯಾವ ತಾತ್ವಿಕ ಕಟ್ಟುಪಾಡಿಗೂ ಒಳಗಾಗದೆ ''ಮನುಷ್ಯನಿಗಾಗಿ ಈ ಎಲ್ಲ ಪ್ರಪಂಚ'' ಎನ್ನುವ ಸರಳ ಸೂತ್ರವನ್ನು ಈ ಉಪನಿಷತ್ತು ಮಂಡಿಸುತ್ತದೆ. ಮನುಷ್ಯನಿಗೆ ಭೂಮಿಯ ಋಣವನ್ನು ತಪ್ಪಿಸುವುದು ಅಧ್ಯಾತ್ಮವಾದದ ಮುಖ್ಯ ಕಸುಬಾಗಿದ್ದರೂ ಸಹ ಐತರೇಯದಲ್ಲಿ ''ಭೋಗಕ್ಕಾಗಿ ಭೂಮಿ'' ಎನ್ನುವ ಹೊಸ ಸಿದ್ಧಾಂತ ರೂಪ ಪಡೆಯುತ್ತದೆ.

ನಾನು ಸ್ಥೂಲವಾಗಿ ಹೇಳಿದ ಇಷ್ಟು ವಿಚಾರಗಳು ಐತರೇಯದ ಸಿದ್ಧಾಂತವನ್ನು 'ಕಾಡು ಗ್ರಹಿಕೆ' ಎಂದು ತೋರಿಸಲು ಸಾಕಾಗುತ್ತವೆ. ಆದರೆ ಈ ಉಪನಿಷತ್ತಿನ ವಿಷಯ ನಿರೂಪಣೆಯ ಕ್ರಮ ಪುರಾಣಗಳ ದಿಟ್ಟ ಕಲ್ಪನೆಗಳ ಜಾಡಿನಲ್ಲಿ ಮುಂದುವರೆದ ಕಾರಣ ಇದನ್ನು ಇನ್ನೂ ವಿವರವಾಗಿ ಪರಿಶೀಲಿಸಬೇಕಾಗುತ್ತದೆ.

ಐತರೇಯದ ಪರಮೋದ್ದೇಶವೇನು ಎಂಬುದನ್ನು ಈ ಮಾತುಗಳ ಹಿನ್ನೆಲೆಯಿಂದ ಪರೀಕ್ಷಿಸಿ ನೋಡಬೇಕು. ಈ ಉಪನಿಷತ್ತನ್ನು ಏಕಮುಖವಾಗಿ ಆಗ್ರಹದೊಡನೆ ತಮಗಿಷ್ಟವಾದ ವ್ಯಾಖ್ಯೆಗೆ ಬಗ್ಗಿಸಿಕೊಂಡು ನಮ್ಮ ಪರಂಪರೆಯು ಓದಿಸಿಕೊಂಡು ಬಂದಿದೆ. ಅಂತಹ ವ್ಯಾಖ್ಯೆಗಳಿಂದ ಬಿಡಿಸಿಕೊಂಡು ಓದಲು ಈ ಮಾತುಗಳು ನೀಡುವ ಸೂಚನೆಗಳನ್ನು ಗಮನಿಸಬೇಕು :

> ''ಮೊಟ್ಟಮೊದಲು ಬೇರೇನೂ ಇರಲಿಲ್ಲ. ಆತ್ಮವು ಮಾತ್ರ ಇತ್ತು. ಆತ್ಮವು ಲೋಕಗಳನ್ನು ಸೃಷ್ಟಿಮಾಡಲು ಯೋಚಿಸಿತು. ಆಗ ಆಕಾಶ, ಅಂತರಿಕ್ಷ, ಮೃತ್ಯುಲೋಕ ಹಾಗೂ, ಪಾತಾಳಗಳು ಕಾಣಿಸಿಕೊಂಡವು. ಈ ನಾಲ್ಕು ಲೋಕಗಳನ್ನು ನೋಡಿಕೊಳ್ಳಲು ಒಬ್ಬ ಪುರುಷನನ್ನು ಸೃಷ್ಟಿಸಬೇಕಾಯಿತು ಆಗ ಪುರುಷನ ಆಕೃತಿಯನ್ನು ನೀರಿನಿಂದ ಕಲ್ಪಿಸಲಾಯಿತು. ಆತ್ಮವು ಮತ್ತೆ ಮತ್ತೆ ಅದೇ ಆಕೃತಿಯನ್ನು ಧ್ಯಾನಿಸುತ್ತ ಕುಳಿತಾಗ ಮೊಟ್ಟೆಯಂತಿದ್ದ ಆಕೃತಿಗೆ ಮುಖ ಮೂಡಿತು. ಮುಖದಿಂದ ವಾಣಿ, ವಾಣಿಯಿಂದ ಅಗ್ನಿ, ಆಮೇಲೆ ಮೂಗು ಆಕಾರ ಪಡೆದವು. ಮೂಗಿನಿಂದ ಪ್ರಾಣ, ಪ್ರಾಣದಿಂದ ವಾಯು, ನಂತರ ಕಣ್ಣುಗಳು, ಕಾಣಿಸಿ ಕೊಂಡವು. ಕಣ್ಣಿನಿಂದ ದೃಷ್ಟಿ, ದೃಷ್ಟಿಯಿಂದ ಸೂರ್ಯ. ಅನಂತರ

> ಪುರುಷನಿಗೆ ಕಿವಿಗಳು ಹುಟ್ಟಿಕೊಂಡವು. ಕಿವಿಯಿಂದ ಶ್ರವಣಶಕ್ತಿ, ಅದರಿಂದ ದಿಕ್ಕುಗಳು; ಕಿವಿಯ ನಂತರ ಪುರುಷನ ಮೇಲೆ ಚರ್ಮದ ಹೊದಿಕೆ ಕಾಣಿಸಿಕೊಂಡಿತು. ಚರ್ಮದ ಮೇಲೆ ಕೂದಲು ಚಿಗುರಿದವು; ಕೂದಲುಗಳಿಂದ ಹೂ ಬಿಡುವ ಹಣ್ಣು ಕೊಡುವ ಮರಗಳು; ಅನಂತರ ಹೃದಯದ ಸೃಷ್ಟಿಯಾಯಿತು. ಹೃದಯದಿಂದ ಮನಸ್ಸು, ಮನಸ್ಸಿನಿಂದ ಚಂದ್ರ. ಹೀಗೆ ಪುರುಷನಿಗೆ ಹೊಕ್ಕಳು ಅರಳಿ, ಹೊಕ್ಕಳಿನಿಂದ ಅಪಾನವೂ ಅಪಾನದಿಂದ ಮೃತ್ಯುವಿನ ಸೃಷ್ಟಿಯೂ ಆದವು. ಕೊನೆಯಲ್ಲಿ ಕಾಣಿಸಿಕೊಂಡದ್ದು ಶಿಶ್ನ; ಶಿಶ್ನದಿಂದ ವೀರ್ಯದ ಸೃಷ್ಟಿ, ವೀರ್ಯದಿಂದ ನೀರು.''

ಐತರೇಯದ ಪ್ರಕಾರ ಪರಮಾತ್ಮನು ಹೀಗೆ ವಿರಾಟ್‌ಪುರುಷನನ್ನು ಸೃಷ್ಟಿಸಿದನು. ವಿರಾಟ್ ಪುರುಷನ ಮೂಲಕ ಪಂಚಮಹಾಭೂತಗಳ ಸೃಷ್ಟಿಯಾಯಿತು. ಒಟ್ಟಿನಲ್ಲಿ ಒಂದು ಮತ್ತೊಂದರ ಅಪೇಕ್ಷೆಯ ಫಲ ಎನ್ನುವಂತೆ ಹುಟ್ಟಿ ಎಲ್ಲವೂ ಪರಮಾತ್ಮನ ಸ್ವರೂಪವಾಗಿದೆ ಅಥವಾ ಪರಮಾತ್ಮನೇ ಎಲ್ಲದಕ್ಕೂ ಮೂಲಕಾರಣ ಎನ್ನುವುದು ಐತರೇಯದ ನಿಲುವು.

ಮತ್ತೊಂದು ಕಡೆ ಐತರೇಯ ಹೀಗೆ ಸೂಚಿಸುತ್ತದೆ. ''ಇಂದ್ರಿಯಗಳೇ ದೇವತೆಗಳು; ಇಂದ್ರಿಯಗಳಿಂದಲೇ ಪಂಚಮಹಾಭೂತಗಳು ಹುಟ್ಟಿದವು.'' ಇಲ್ಲಿ ಐತರೇಯವು ಚಿಂತನೆಯನ್ನು ಇಂದ್ರಿಯಗಳ ನೆಲೆಯಿಂದ ಆರಂಭಿಸಿ ಇಂದ್ರಿಯಗಳಿಗೆ ಸಾರ್ವಭೌಮ ಸ್ಥಾನವನ್ನು ನೀಡುತ್ತದೆ. ಐತರೇಯ ಹೇಳುವಂತೆ ಈ ಇಂದ್ರಿಯ ದೇವತೆಗಳು ಪರಮಾತ್ಮನು ನಿರ್ಮಿಸಿದ –

> – ''ವಿರಾಟ್‌ಪುರುಷನ ದೇಹದೊಳಗೆ ಸೇರಿಕೊಂಡವು. ಇಂದ್ರಿಯ ದೇವತೆಗಳಿಗೆ ಹಸಿವಿನ ಬಾಧೆ ತಟ್ಟಿತು ಮತ್ತು ನೀರಡಿಕೆಯಾಯಿತು. ಅವುಗಳನ್ನು ನಿವಾರಿಸಲು ತಮಗೊಂದು ಉಪಾಯವನ್ನು ಕಲ್ಪಿಸಿಕೊಡುವಂತೆ ಪರಮಾತ್ಮನಲ್ಲಿ ಇಂದ್ರಿಯಗಳು ಮೊರೆಯಿಟ್ಟವು. ಆಗ ಅವುಗಳ ಎದುರಿಗೆ ಒಂದು ಹಸು ಕಾಣಿಸಿಕೊಂಡಿತು. ಹಸು ದೇವತೆಗಳಿಗೆ ಇಷ್ಟವಾಗಲಿಲ್ಲ. ಮತ್ತೆ ಒಂದು ಕುದುರೆ ಕಾಣಿಸಿಕೊಂಡಿತು. ಕುದುರೆಯೂ ಅವರಿಗೆ ಇಷ್ಟವಾಗಲಿಲ್ಲ. ಕೊನೆಗೆ ಒಂದು ಮನುಷ್ಯ ರೂಪವನ್ನು ಸೃಷ್ಟಿಸಿ ನಿಲ್ಲಿಸಿದಾಗ, 'ಮನುಷ್ಯ ರೂಪ ದೊರೆಯುವುದೆಂದರೆ ಪುಣ್ಯವೇ ಬೇಕು' ಎಂದು ಉದ್ಗರಿಸುತ್ತ ಎಲ್ಲ ಇಂದ್ರಿಯ ದೇವತೆಗಳೂ

ಮನುಷ್ಯನ ಒಳಗೆ ಸೇರಿಕೊಂಡವು. ಅಗ್ನಿಯು ವಾಣಿಯಾಗಿ ಬಾಯಿಯೊಳಗೆ, ಸೂರ್ಯನು ದೃಷ್ಟಿಯಾಗಿ ಕಣ್ಣಿನೊಳಗೆ ಪ್ರವೇಶಿಸಿದರು. ದಿಕ್ಕುಗಳು ಶ್ರವಣಶಕ್ತಿಯಾಗಿ ಕಿವಿಯನ್ನು ಸೇರಿಕೊಂಡವು. ಗಿಡಮರಗಳು ಕೂದಲಾಗಿ ಚರ್ಮದೊಳಗೂ ಚಂದ್ರನು ಮನಸ್ಸಾಗಿ ಹೃದಯದೊಳಗೂ ಸೇರಿಕೊಂಡ ಮೇಲೆ ಮೃತ್ಯು ಅಪಾನವಾಗಿ ನಾಭಿಯಲ್ಲಿ ಸೇರಿಕೊಂಡಿತು. ಹೀಗೆ ನೀರು ಕೊನೆಗೆ ವೀರ್ಯವಾಗಿ ಶಿಶ್ನದೊಳಗೆ ಸೇರಿಕೊಂಡಾಗ'' – *(ಐತರೇಯೋಪನಿಷತ್ತು).*

ವಿರಾಟ್‌ಪುರುಷನಿಂದ ರಚಿತವಾದ ಪಂಚಮಹಾಭೂತಗಳು ಸೂರ್ಯ ಚಂದ್ರರು ವನಸ್ಪತಿಗಳು ಕೊನೆಗೆ ಸಾವೂ ಸಹ ಮನುಷ್ಯ ದೇಹದಲ್ಲಿ ತಮ್ಮ ಸ್ಥಾನವನ್ನು ಹಂಚಿಕೊಂಡು ಸೃಷ್ಟಿಯ ಕೆಲಸ ಸ್ಥಗಿತಗೊಳ್ಳುತ್ತದೆ.

ಐತರೇಯ ಹೇಳುವ ಸೃಷ್ಟಿಯ ಈ ಪುರಾಣದ ರಹಸ್ಯ ಈಗ ಬಯಲಾಗುತ್ತದೆ. ಇಲ್ಲಿ ಪರಮಾತ್ಮನು ವಿರಾಟ್ ಪುರುಷನನ್ನು ನಂತರ ಅವನ ಇಂದ್ರಿಯಗಳ ಸುಖಕ್ಕಾಗಿ ಮನುಷ್ಯರನ್ನು ನಿರ್ಮಾಣಮಾಡುತ್ತಾನೆ; ಗಿಡ-ಮರಗಳು, ಹಸು-ಕುದುರೆಗಳು ಅಥವಾ ಪಶು-ಪಕ್ಷಿಗಳಾಗಲೀ ಪ್ರಪಂಚದಲ್ಲಿ ಪ್ರಧಾನ ಸೃಷ್ಟಿಗಳಲ್ಲ. ಹಸಿವು - ಬಾಯಾರಿಕೆಯ ಇಂದ್ರಿಯ ದೇವತೆಗಳು ಉಳಿದ ಸೃಷ್ಟಿಯನ್ನೆಲ್ಲ ಹಂಚಿಕೊಂಡು ಬಿಡುತ್ತವೆ. ಅಂದರೆ, ಐತರೇಯಕ್ಕೆ ತೋರುವುದು ಸಮದರ್ಶಿಯಾದ ಆಧ್ಯಾತ್ಮಿಕ ಜೀವನವಲ್ಲ, ಇಂದ್ರಿಯಗಳ ಹೆಬ್ಬಯಕೆಯಿಂದ ಮತ್ತು ಹಾಹಾಕಾರಗಳಿಂದ ತುಂಬಿದ ಜೀವನಕ್ರಮ ಅದಕ್ಕೆ ನಿಜವೆನಿಸುತ್ತದೆ.

ಐತರೇಯದ ಆಲೋಚನೆಯ ಲಹರಿ ಇಲ್ಲಿಗೇ ನಿಲ್ಲುವುದಿಲ್ಲ. ಉಳಿದ ಉಪನಿಷತ್ತುಗಳು ಭೂಮಿಯಿಂದ ಮನುಷ್ಯನ ನಿಷ್ಕ್ರಮಣದ ಉಪಾಯ ಗಳನ್ನು ಚಿಂತಿಸಿದರೆ ಇದು ಮಾತ್ರ ಭೂಮಿಯನ್ನು ಮನುಷ್ಯನಿಗೆ ಸೊತ್ತನ್ನಾಗಿ ಪರಿವರ್ತಿಸಿ ನೀಡಲು ಹವಣಿಸುತ್ತದೆ. ಮನುಷ್ಯನ ಇತಿಹಾಸ ಆರಂಭ ವಾಗುವುದೇ ಅವನ ಆಹಾರದ ಹುಡುಕಾಟದಿಂದ. ಅವನ ಠೀವಿ-ಠಕ್ಕುತನಗಳೂ ಸಹ ಅವನ ಉದರಂಭರಣದ ಸೌಕರ್ಯ ಮತ್ತು ಸಮಸ್ಯೆಗಳ ನಡುವೆ ಹೆಮ್ಮರವಾಗಿ ಬೆಳೆದುನಿಲ್ಲುತ್ತವೆ. ಐತರೇಯವು ಇದನ್ನೆಲ್ಲ ಲೋಕದಲ್ಲಿ ಸಹಜ ವರ್ತನೆ ಎಂದು ಬಗೆಯುತ್ತದೆ. ಈ ಋಷಿಗೆ ಪ್ರೇಮದ ರಾಗವಾಗಲೀ ಒಂಟಿತನದ ಬಾಧೆಯಾಗಲೀ ಆದರ್ಶದ ಭ್ರಾಂತಿಯಾಗಲೀ ತಟ್ಟುವುದಿಲ್ಲ. ಇಲ್ಲಿ, ಮನುಷ್ಯನೆಂದರೆ ಸದಾ ಆಹಾರಕ್ಕೆ ಬಾಯ್ತೆರದು ನಿಂತಿರುವ ತಪ್ತ

ಇಂದ್ರಿಯಗಳ ಮರುಭೂಮಿ. ಮರುಭೂಮಿ ಏಕೆಂದರೆ ಅವನ ವಿಷಾದದ ಸಂದರ್ಭ ಹಾಗೂ ನಗುವಿನ ಸಂಕೇತಗಳು ಕಣ್ಣಿಗೆ ಬೀಳುವುದಿಲ್ಲ.

ಸೃಷ್ಟಿಯ ಮುಖ್ಯ ಪ್ರಯೋಜನ ಮನುಷ್ಯನಿಗೆ ಸಿಗಬೇಕು ಹಾಗೂ, ಅವನ ಇಂದ್ರಿಯಗಳ ಲಾಲನೆ-ಪಾಲನೆಗಳಿಗಾಗಿ ಅವನ ಜೀವನದ ಮಹತ್ವಾಕಾಂಕ್ಷೆಗಳೆಲ್ಲ ಮೀಸಲಾಗಬೇಕು ಎನ್ನುವಲ್ಲಿಗೇ ಐತರೇಯದ ವಿಚಾರಕ್ರಾಂತಿ ನಿಲ್ಲುವುದಿಲ್ಲ. ಪರಮಾತ್ಮನ ಉತ್ಕಟವಾದ ಬಯಕೆಯಿಂದ ರಚನೆಗೊಂಡ ವಿರಾಟ್‌ಪುರುಷನ ಸರ್ವಸ್ವವನ್ನು ಹಂಚಿಕೊಂಡು ಹುಟ್ಟಿಬಂದ ಮನುಷ್ಯನಿಗೆ ಹಾಗೂ ಅವನು ಲಾಲಿಸಬೇಕಾದ ಇಂದ್ರಿಯ ದೇವತೆಗಳಿಗೆ ಇನ್ನೂ ಹೆಚ್ಚು ಹೆಚ್ಚು ಅನ್ನವನ್ನು ಸೃಷ್ಟಿಸುತ್ತ ಇರಬೇಕಲ್ಲ! ಇಲ್ಲಿ ಐತರೇಯದ ವಿಚಾರಧಾರೆ ಅಡೆತಡೆಯಿಲ್ಲದೆ ಮುಂದುವರೆಯುತ್ತದೆ. ಐತರೇಯದ ಹೇಳಿಕೆಗಳನ್ನು ನಂಬಬಹುದಾದರೆ, ನೀರನ್ನು ಮನದಲ್ಲಿಟ್ಟುಕೊಂಡು ಪರಮಾತ್ಮನು ಧ್ಯಾನಿಸಿದಾಗ ನೀರಿನಿಂದ ಪೋಷಣೆ ಪಡೆಯುವ ಆಕಾರಗಳು ಜೀವಧಾರಣೆ ಮಾಡುತ್ತವೆ. ಅಂದರೆ, ಸಸ್ಯರಾಶಿ, ಎಲ್ಲ ಮೃಗ-ಪಕ್ಷಿಗಳು ಹಾಗೂ ಇತರ ತಿರ್ಯಕ್ ಜಂತುಗಳು – ಇವುಗಳನ್ನೆಲ್ಲ ಕಬಳಿಸಲು ಪರಮಾತ್ಮನ ನ್ಯಾಯಾಲಯದಲ್ಲಿ ತೀರ್ಪು ಸಿಗುತ್ತದೆ. ''ಮನುಷ್ಯ ಹೀಗೆ ಪಡೆಯುವ ಅನ್ನವೇ ಅವನ ಆಯುಷ್ಯ'' ಎಂದು ಐತರೇಯ ಹೇಳುತ್ತದೆ.

ಇಂದಿನ ನಮಗೆ ಐತರೇಯದ ಈ ಪುರಾಣ ತಮಾಷೆಯದಾಗಿ ತೋರುತ್ತದೆ. ಆದರೆ ಇದು ಈಗ ಎಷ್ಟೊಂದು ನಿಜವಾಗುತ್ತದೆ ಎಂದು ನೆನೆದರೆ ಆಶ್ಚರ್ಯವಾಗುತ್ತದೆ. ಈ ಕಲ್ಪನೆಯ ಹಿಂದೆ ಗಹನವಾಗಿ ಕೆಲಸ ಮಾಡಿದ ಸ್ವಾರ್ಥ, ಭೂಮಿಯ ಮೇಲೆ ಮನುಷ್ಯ ಬಯಸುವ ಹಿಡಿತ, ನೀರಿನಿಂದ ಜೀವ ಲಕ್ಷಣವನ್ನು ತುಂಬಿಕೊಳ್ಳುವ ಪರಿಸರದ ಮೇಲೆ ಅವನ ಯಜಮಾನಿಕೆ, ಈಗ ಹೆಚ್ಚು ಗತ್ತು ಮತ್ತು ದರ್ಪಗಳಿಂದ ನಿಜವಾಗುತ್ತಿರುವ ಕಾರಣ ಮನುಷ್ಯ ಸ್ವಭಾವದ ಪ್ರಾಚೀನತೆಯು ಅಸಂತುಷ್ಟಿಯ ಜೀವನ ದೃಷ್ಟಿಯನ್ನು ನಾವು ಮತ್ತೆ ಪ್ರಶ್ನಿಸಿಕೊಳ್ಳದಂತೆ ಮಾಡುತ್ತದೆ. ನಮ್ಮ ನಿರ್ಲಜ್ಜತನದ ಪುರಾತನ ದಾಖಲೆಯಾದ ಐತರೇಯ ಉಪನಿಷತ್ತಿನ ಓದು ನಮ್ಮ ಧೋರಣೆಯನ್ನು ತಿದ್ದಿಕೊಳ್ಳಲು ಅನಿವಾರ್ಯವೆನಿಸುತ್ತದೆ.

ಐತರೇಯವನ್ನು ಓದುವಾಗ ನಮ್ಮ ಗಮನವು ಪರಮಾತ್ಮ - ವಿರಾಟ್ ಪುರುಷ - ಜೀವಾತ್ಮಗಳ ಸೃಷ್ಟಿ - ಪಂಚಮಹಾಭೂತಗಳು – ಈ ಮೊದಲಾದ ಸರಳರೇಖೆಯಲ್ಲಿ ಉಕ್ತವಾದ ವಿಷಯಗಳಲ್ಲಿ ಏಕಾಗ್ರವಾಗಿ ನೆಲೆಸಿಬಿಟ್ಟರೆ ನಮ್ಮ ವಿವೇಕದ ಜಾಡು ಇದರಿಂದ ತಪ್ಪುತ್ತದೆ. ಇಲ್ಲಿ ವೇದಾಂತದ ಉಜ್ವಲ

ತತ್ತ್ವಗಳನ್ನೇ ಕಾಣತೊಡಗುತ್ತೇವೆ. ಆದರೆ ಅನುಭಾವದ ತೀವ್ರತೆ ಮತ್ತು ತನ್ಮಯತೆ ಇಲ್ಲದಿರುವ ಕಾರಣ ಈ ಸೃಷ್ಟಿಯ ಪುರಾಣವನ್ನು ಕಾಡುಗ್ರಹಿಕೆಯೆಂದೇ ಕರೆಯಬೇಕಾಗಿದೆ.

# ಛಾಂದೋಗ್ಯದ ಉಪಾಖ್ಯಾನಗಳು

ಛಾಂದೋಗ್ಯವು ಸಾಮವೇದಕ್ಕೆ ಸೇರಿದ ಉಪನಿಷತ್ತು. ಛಾಂದೋಗ್ಯದ ಗುರಿ ತತ್ವದರ್ಶನ ಅಂದರೆ, ಸತ್ಯದ ಅರಿವು. ಇದಕ್ಕೆ ಮಿಗಿಲಾದ ಜೀವನೋದ್ದೇಶ ಧಾರ್ಮಿಕ ವಿವೇಕವುಳ್ಳ ಹಿಂದೂ ಜನಾಂಗಕ್ಕೆ ಮತ್ತೊಂದಿಲ್ಲ. ಇಲ್ಲಿ ತತ್ವಜ್ಞಾನವು ಜಿಜ್ಞಾಸೆಯ ವಿಷಯವಾಗಿದ್ದರೂ ಇದು ಅನುಸರಿಸುವ ಕ್ರಮ ಬೇರೆ. ಇದರ ನಿರೂಪಣೆಯ ಕ್ರಮವನ್ನು ಉಳಿದ ಉಪನಿಷತ್ತುಗಳ ಶೈಲಿಗೆ ಹೋಲಿಸುವಂತಿಲ್ಲ. ಛಾಂದೋಗ್ಯದಲ್ಲಿ ನಿರೂಪಣೆಯನ್ನು ಉಪಾಖ್ಯಾನಗಳ ಮೂಲಕ ನಿರ್ವಹಿಸಲಾಗಿದೆ. ಹೆಚ್ಚಿನ ಅರ್ಥಕ್ಕೆ ಒಯ್ದು ನಿಲ್ಲಿಸುವ ಕಥಾನಕಗಳ ಮೂಲಕ ಹಾಗೂ ಮೌನದಲ್ಲಿಯ ಚಿಂತನೆ ಮತ್ತು ಧ್ಯಾನದಲ್ಲಿಯ ಆವಾಹನೆ ಮಾಡಿಕೊಳ್ಳುವ ಕ್ರಿಯೆಗಳಿಗೆ ಸರಿಸಮನಾಗುವ ಮಾತುಕತೆಯಿಂದ ಈ ಉಪನಿಷತ್ತು ನಮ್ಮನ್ನು ತನ್ನ ಆಧ್ಯಾತ್ಮಿಕ ವಲಯದೊಳಗೆ ಕ್ಷಣ ಬಿಡದೆ ಸೆಳೆದುಕೊಳ್ಳುತ್ತದೆ.

ನಾನು ನಿಜವೆಂದು ಬಗೆಯುವ ಅರ್ಥಗಳಲ್ಲಿ ಛಾಂದೋಗ್ಯದ ಉಪಾಖ್ಯಾನಗಳನ್ನು ಓದುತ್ತ ಅವುಗಳನ್ನು ಜೋಡಿಸುವ ಕೆಲಸವನ್ನಷ್ಟೇ ನಾನಿಲ್ಲಿ ಮಾಡಿದ್ದೇನೆ. ಛಾಂದೋಗ್ಯವನ್ನು ಮೊದಲ ಬಾರಿಗೆ ಓದುವಾಗ ಆ ರೂಪದ ನಿಗೂಢತೆ ವಿಸ್ಮಯ ಹುಟ್ಟಿಸುತ್ತದೆ. ಮತ್ತೆ ಮತ್ತೆ ಓದಿದಾಗ ಪಾತ್ರೆಯಿಂದ ಚೆಲ್ಲಿದ ನೀರು ನೆಲಕ್ಕೆ ಬಿದ್ದು ಅಲ್ಲಿ ಇಲ್ಲಿ ನುಸುಳಿ ತಗ್ಗಿಗೆ ದುಡುಕುವಂತೆ ಎಲ್ಲ ಒಂದೇ ದಿಕ್ಕಿಗೆ ಧಾವಿಸುವುದು ಕಾಣುತ್ತದೆ. ಹೀಗೆ ಅನೇಕ ಉಪಾಖ್ಯಾನಗಳನ್ನು ವಾಹಕಗಳನ್ನಾಗಿ ಮಾಡಿಕೊಂಡು ಆಧ್ಯಾತ್ಮಿಕ ವಿಜ್ಞಾನದ ಘನ ತತ್ವಗಳನ್ನು ಪರಿಶೋಧಿಸುವ ಮತ್ತು ಅಖಂಡವಾದ ಏಕತ್ವವನ್ನು ವಿವರಿಸುವ ಯತ್ನವನ್ನು ಈ ಉಪನಿಷತ್ತಿನಲ್ಲಿ ಕಾಣುತ್ತೇವೆ.

ಛಾಂದೋಗ್ಯದ ಹರಹು ಮತ್ತು ಅಗಾಧತೆಗಳ ಬಗ್ಗೆ ಹೇಳುವ ಮೊದಲು ಇದರ ಗಾತ್ರದ ಬಗ್ಗೆ ಹೇಳಬೇಕು. ಬಹುಶ್ರುತವಾದ 'ತತ್ತ್ವಮಸಿ' (ಸದ್ವಸ್ತುವೆಂದು ಕರೆಯುವ ಆ ಆತ್ಮವೇ ನೀನಾಗಿರುವೆ) ಎಂಬ ಮಹಾವಾಕ್ಯದ ಅರ್ಥಚಿಂತನೆಯನ್ನು ಸುಮಾರು 154 ಖಂಡಗಳಲ್ಲಿ ನಡೆಸುವ ಛಾಂದೋಗ್ಯವು ಒಂದರ್ಥದಲ್ಲಿ ಭೂಮಿಗಾತ್ರದ್ದು. ಈ ಖಂಡಗಳನ್ನು ಎಂಟು ಅಧ್ಯಾಯಗಳಲ್ಲಿ

ಅಡಕಗೊಳಿಸಿ ವಿಪುಲವಾದ ಚರ್ಚೆ, ಸಂವಾದ ಮತ್ತು ಪರಿಶೀಲನೆಗಳನ್ನು ಶಿಸ್ತುಬದ್ಧಗೊಳಿಸಲಾಗಿದೆ. ಅನೇಕ ಬಗೆಯಲ್ಲಿ ಚರ್ಚಿಸುತ್ತ ಸಂವಾದಿಸುತ್ತ ಅನೇಕ ದಿಕ್ಕುಗಳಿಂದ ಪಯಣಿಸುತ್ತ ಕೊನೆಗೆ ಛಾಂದೋಗ್ಯವು ಪ್ರತಿಪಾದಿಸುವ ವಿಷಯವೂ ಅಗಾಧವಾದುದು. ಸದ್ವಸ್ತುವಿನ ಪ್ರತಿಪಾದನೆ, ಅದರ ಅರಿವು, ಸದ್ವಸ್ತುವಿನಿಂದ ವಿಶ್ವೋತ್ಪತ್ತಿ. 'ಆ ಸದ್ವಸ್ತು ನೀನೇ' ಎಂದು ಮುಂತಾದ ಹಲವು ಸಾಧನೆಗಳು, ಈ ಉಪನಿಷತ್ತಿನದಾಗಿವೆ. ಭಾರತೀಯ ವೇದಾಂತದ ಗಮನವೆಲ್ಲ ನೇರಿಕೊಳ್ಳುವುದು ''ತತ್ತ್ವಮಸಿ'' ಎನ್ನುವ ಮಹಾವಾಕ್ಯದಲ್ಲಿ. ಈ ಮಹಾವಾಕ್ಯವು ಅನುಭವರೂಪದಲ್ಲಿ ಸ್ವಯಾರ್ಜಿತವಾಗುವ ಕಾಲವನ್ನು ನಿರೀಕ್ಷಿಸುವಂತೆ, ಅಂತಹ ಪಕ್ವ ಸ್ಥಿತಿಗಾಗಿ ಕಾಯುತ್ತ ಕೂರುವಂತೆ, ಛಾಂದೋಗ್ಯವು ಒತ್ತಾಯಿಸುವಂತಿದೆ.

ಉಪಾಖ್ಯಾನಗಳ ಮೂಲಕ ತತ್ತ್ವಗಳ ವಿವೇಚನೆ ಮಾಡುವ ಈ ಉಪನಿಷತ್ತಿನ ಕ್ರಮ ಹೊಸದು. ಹಿಂದೆ, ಕಠೋಪನಿಷತ್ತಿನಲ್ಲಿ ನಚಿಕೇತನ ಉಪಾಖ್ಯಾನವನ್ನು ಬಳಸಿಕೊಳ್ಳಲಾಗಿದೆ. ಆದರೆ, ಕಠವನ್ನು ಆರಂಭಿಸಲು ಅದು ಒಂದು ನೆಪ ಮಾತ್ರವಾಗಿತ್ತು. ಛಾಂದೋಗ್ಯದಲ್ಲಿ ಉಪಾಖ್ಯಾನಗಳೇ ಪ್ರತಿಬಿಂಬವಾಗಿ ಅರಿವಿನ ಸ್ವರೂಪವನ್ನು ಬೆಳಗುತ್ತವೆ. ಆದರೆ ಛಾಂದೋಗ್ಯವು ಇಷ್ಟೇ ಅಲ್ಲ. ಇಲ್ಲಿ ಅನೇಕ ನಿರೂಪಣೆಗಳಿವೆ, ಪ್ರವಚನರೂಪದ ಭಾಗಗಳೂ ಇವೆ. ಓಂಕಾರದ ಮಹಿಮೆ ಮತ್ತು ಅದರ ಮೂಲವನ್ನು ಇದು ವಿವರಿಸುತ್ತದೆ. ಜೊತೆಗೆ ಓಂಕಾರದ ಉಪಾಸನೆ, ಯಜ್ಞೋಪಾಸನೆ, ಆದಿತ್ಯೋಪಾಸನೆ ಮತ್ತು, ಅವುಗಳ ಫಲ, ವಾಯು-ಪ್ರಾಣಗಳನ್ನು ಸಾಕ್ಷಾತ್ ಬ್ರಹ್ಮರೂಪದಲ್ಲಿ ಉಪಾಸಿಸುವುದು – ಹೀಗೆ ಬಹುಮುಖ್ಯವಾದ ಹಲವು ಹತ್ತು ವಿಷಯಗಳನ್ನು ಛಾಂದೋಗ್ಯವು ಒಳಗೊಂಡಿದೆ.

ವಿಶ್ವೋತ್ಪತ್ತಿಯ ಕಲ್ಪನೆ ಹಾಗೂ ಆಧ್ಯಾತ್ಮಿಕ ಚಿಂತನೆ ಇವೆರಡೂ ಮೇಲುನೋಟಕ್ಕೆ ಬೇರೆ ಬೇರೆಯಾಗಿ ಕಂಡರೂ ಛಾಂದೋಗ್ಯವು ಅಲ್ಲೊಂದು ಸಮನ್ವಯವನ್ನು ಕಾಣುತ್ತದೆ. ಒಂದರ್ಥದಲ್ಲಿ ಈ ಮನುಷ್ಯ ದೇಹವೇ ವಿಶ್ವದ ಪ್ರತಿರೂಪ. ನಿಸರ್ಗವನ್ನು ಮೂಲಧಾತುವನ್ನಾಗಿ ಮಾಡಿಕೊಂಡು ಈ ದೇಹವನ್ನು ರಚಿಸಲಾಗಿದೆ. ಹೀಗಿರುವಾಗ ಆ ವಿಶ್ವಾತ್ಮನೂ ಈ ಜೀವಾತ್ಮನೂ ಬೇರೆ ಎನ್ನುವುದು ಹೇಗೆ? ಇಲ್ಲಿರುವ ಅಸಂಖ್ಯ ಜೀವಿಗಳನ್ನು ಭೇದ ದೃಷ್ಟಿಯಿಂದ ನೋಡುವುದಾಗಲೀ ವ್ಯವಹರಿಸುವುದಾಗಲೀ ಹೇಗೆ? – ಈ ಪ್ರಶ್ನೆಗಳನ್ನು ಎತ್ತುವ ಛಾಂದೋಗ್ಯವು ಭೇದದೃಷ್ಟಿಯನ್ನು ನಿರಾಕರಿಸಿ ಅಭೇದವನ್ನು ಸಮರ್ಥಿಸುತ್ತದೆ.

ಅಂದರೆ ಛಾಂದೋಗ್ಯೋಪನಿಷತ್ತು ಬೋಧಿಸುವ ದರ್ಶನದಲ್ಲಿ ಇಂದಿನ ಅರ್ಥದಲ್ಲಿ ಮೆರೆಯುತ್ತಿರುವ ದೇವರಿಲ್ಲ. ದೇವರ ಭೀತಿಯಾಗಲೀ ದೇವರ ಹಂಗಾಗಲೀ ಈ ಜೀವಕ್ಕೆ ಇಲ್ಲ. ಹಿಂದೂ ಪುರಾಣಗಳು ಸೃಷ್ಟಿಸಿದ ದೇವತೆಗಳಿಗೆ ಬಹುಶಃ ಛಾಂದೋಗ್ಯದ ಕಾಲದಲ್ಲಿ ಅಸ್ತಿತ್ವವಿರಲಿಲ್ಲ. ಅಥವಾ ಛಾಂದೋಗ್ಯಕ್ಕೆ ಅವುಗಳು ತಮಾಷೆಯಾಗಿ ಕಂಡಿರಬೇಕು. ಪ್ರಾಣಿಯಿಂದ ಪರಮಾತ್ಮನವರೆಗೆ, ವ್ಯಕ್ತದಿಂದ ಅವ್ಯಕ್ತದವರೆಗೆ ಅಭೇದವೊಂದನ್ನೇ ಕಾಣುವ ಛಾಂದೋಗ್ಯದ ಋಷಿಗಳಿಗೆ ಅಭೇದಕ್ಕಿಂತ ಭಿನ್ನವಾದ ದೇವರನ್ನು ಕಾಣುವುದು ಅಸಾಧ್ಯವಾಗಿರಬಹುದು.

ಈ ಎಲ್ಲ ಕಾರಣಗಳ ಹಿನ್ನೆಲೆಯಿಂದ ಹೇಳುವುದಾದರೆ, ಛಾಂದೋಗ್ಯವು ಈ ಬದುಕಿಗೇ, ಈ ಮಣ್ಣಿನಲ್ಲಿ ಹೊಂದಿಕೊಂಡ ಜೀವನಕ್ಕೆ ಪರವಾಗಿ ನಿಲ್ಲುವ ಉಪನಿಷತ್ತು. ಛಾಂದ್ಯೋಗದ ರಹಸ್ಯ ಇದೇ ಆಗಿರುತ್ತದೆ. ಎಲ್ಲ ಕೂಡಿ ಉಂಡುಟ್ಟು ಸುಖವಾಗಿ ಬದುಕುವ ಹಾಗೂ ಸರ್ವಹಿತ ಸಾಧನೆಯಲ್ಲಿ ತೊಡಗಿ ನೀತಿಯಿಂದಿರುತ್ತ ಸತ್ಯಾನ್ವೇಷಣೆ ಮಾಡುವ ಉಪದೇಶ ಇಲ್ಲಿದೆ. ಛಾಂದೋಗ್ಯದ ವಿಚಾರವಾಗಿ ನಾನು ಸತ್ಯದ ಒಂದಂಶವನ್ನು ಮಾತ್ರ ಗ್ರಹಿಸಿರಬಹುದು. ಛಾಂದೋಗ್ಯದ ಉಪಾಖ್ಯಾನಗಳಲ್ಲಿ ಈ ಕುರಿತು ಇನ್ನೂ ಹೆಚ್ಚಿನ ಅರಿವಿನ ಕಿಡಿಗಳಿವೆ. ಈ ಹಿನ್ನೆಲೆಯಲ್ಲಿ ಛಾಂದೋಗ್ಯದ ಹನ್ನೊಂದು ಉಪಾಖ್ಯಾನಗಳನ್ನು ಕೆಳಗಿನಂತೆ ಜೋಡಿಸಿ ನಾನು ನಿಜವೆಂದು ಬಗೆದ ಅರ್ಥದಲ್ಲಿ ಓದಲು ಯತ್ನಿಸಿದ್ದೇನೆ –

1. ಆರುಣಿ, ಆರುಣಿಯ ಮಗ ಶ್ವೇತಕೇತು
2. ನಾರದ ಮತ್ತು ಸಂತ ಸನತ್ಕುಮಾರ
3. ಪ್ರಾಚೀನಶಾಲ, ಅವನ ಗೆಳೆಯರು ಹಾಗೂ, ಆರುಣಿ
4. ರಾಜಾಜಾನ ಶ್ರುತಿಯ ಉಪಾಖ್ಯಾನ
5. ಪ್ರಾಣದ ಶ್ರೇಷ್ಠತೆ
6. ಮತ್ತೆ ಪ್ರಾಣ ಮತ್ತೆ ಇಂದ್ರಿಯಗಳು
7. ಪ್ರವಾಹಣನ ಉಪಾಖ್ಯಾನ
8. ಸತ್ಯಕಾಮ ಜಾಬಾಲ
9. ಸತ್ಯಕಾಮ, ಸತ್ಯಕಾಮನ ಶಿಷ್ಯ ಉಪಕೋಸಲ
10. ಉಷಸ್ತಿಯ ಯಜ್ಞೋಪಾಸನೆ
11. ಗ್ಲಾವನ ಜ್ಞಾನೋದಯ.

– ಒಂದು –

# ಆರುಣಿ, ಆರುಣಿಯ ಮಗ ಶ್ವೇತಕೇತು

ಉದ್ದಾಲಕ ಆರುಣಿಯು ದೊಡ್ಡ ತತ್ತ್ವಜ್ಞಾನಿ. ಅವನ ಮಗ ಶ್ವೇತಕೇತು ಕಡು ಮೂರ್ಖನಾಗಿ ಬೆಳೆಯುತ್ತಿದ್ದನು. ಅದನ್ನು ನೋಡಲಾಗದೆ ತಂದೆಯಾಗಿ ತನ್ನ ಕರ್ತವ್ಯವೇನೆಂದು ಆರುಣಿ ಯೋಚಿಸತೊಡಗಿದನು ಕೊನೆಗೆ ಮಗನನ್ನೂ ಉದ್ದೇಶಿಸಿ ಹೀಗೆ ಹೇಳಿದನು :

''ಶ್ವೇತಕೇತು, ಆಚಾರ್ಯನನ್ನು ಹುಡುಕಿಕೊಂಡು ಹೋಗು. ವಿದ್ಯಾವಂತನಾಗಿ ಬಾ. ಇಲ್ಲಿಯವರೆಗೆ ನಮ್ಮ ವಂಶದಲ್ಲಿ ಯಾರೂ ಅಧ್ಯಯನ ಮಾಡದೆ ಬ್ರಾಹ್ಮಣ ಎನ್ನುವ ಹೆಸರು ಹೊತ್ತು ಬದುಕಿದ್ದಿಲ್ಲ. ಹೋಗು.''

ಶ್ವೇತಕೇತುವಿಗೆ ಆಗ ವಯಸ್ಸು ಹನ್ನೆರಡು. ತನ್ನ ಇಪ್ಪತ್ನಾಲ್ಕನೆಯ ವಯಸ್ಸಿನವರೆಗೆ ಅವನು ಆಚಾರ್ಯನ ಬಳಿ ನಿಂತು ಗುರುಶುಶ್ರೂಷೆ ಮಾಡಿ, ಓದಿ, ಗಂಭೀರ ಮನಸ್ಸಿನವನಾಗಿ, ವೇದಜ್ಞಾನದ ಅಭಿಮಾನದಿಂದ ತುಳುಕುತ್ತ ಅವಿನಯವನ್ನು ಮೈಗೂಡಿಸಿಕೊಂಡು ಮನೆಗೆ ಮರಳಿದನು. ಮಗನನ್ನು ಕಂಡು ಸಂತೋಷಗೊಂಡರೂ ಆರುಣಿ ಕೇಳಿದನು –

''ಮಗು, ನೀನು ತುಂಬ ಗಂಭೀರನಾಗಿರುವೆ. ವೇದಾಭ್ಯಾಸಗಳಿಂದ ತುಂಬಿದ ಕೊಡದಂತೆ ಕಾಣುವೆ. ಹಾಗಾದರೆ ನೀನು ಕೇಳದುದನ್ನು ಕೇಳುವ, ಊಹಾತೀತವಾದುದನ್ನು ಊಹಿಸುವ, ಅರಿವಿಗೆ ಸಿಗದುದನ್ನು ಅರಿಯುವ, ವಿದ್ಯೆಯ ಉಪದೇಶವನ್ನು ಪಡೆದು ಬಂದಿರುವೆ !''

''ಅದು ಯಾವುದು ?'' – ಶ್ವೇತಕೇತು ಉದ್ಗರಿಸಿದನು.

ಆರುಣಿಯ ಊಹೆ ನಿಜವಾಗಿತ್ತು. ಶ್ವೇತಕೇತುವಿಗೆ ನಿಜವಾದ ವಿದ್ಯೆ ತಿಳಿದಿರಲಿಲ್ಲ.

''ವತ್ಸ, ಅದು ಶ್ರೇಷ್ಠವಾದ ಸತ್ ಎಂಬ ವಸ್ತುವಿನ ಉಪದೇಶ. ಅದೇ ನಿಜವಾದ ವಿದ್ಯೆ. ಉದಾಹರಣೆಗಾಗಿ, ನೋಡು; ಮಣ್ಣಿನ ಒಂದು ಮುದ್ದೆಯನ್ನು ಅರಿತಮೇಲೆ ಮಣ್ಣಿನಿಂದ ಮಾಡಿದ ಮಡಕೆ ಮೊದಲಾದ ಎಲ್ಲ ವಸ್ತುವಿನ ಅರಿವೂ ಸಿಕ್ಕಿಬಿಡುತ್ತದೆ; ಒಂದು ಚಿನ್ನದ ತುಂಡನ್ನು ಅರಿತಮೇಲೆ ಚಿನ್ನದಿಂದ ಆದ ವಸ್ತುಗಳನ್ನೆಲ್ಲ ಅರಿಯುತ್ತೇವೆ; ಒಂದು ಲೋಹದ ಉಗುರುಗತ್ತಿಯನ್ನು ಅರಿತ ಮೇಲೆ ಲೋಹದ ಯಾವುದೇ ವಸ್ತುವಿನ ಅರಿವೂ ನಮಗೆ ಸಹಜವಾಗಿ ಬಂದಿರುತ್ತದೆ. ಅಂದರೆ, ಮಣ್ಣು ಕಾರಣ ಮಡಕೆ ಕಾರ್ಯ; ಚಿನ್ನ ಕಾರಣ ಆಭರಣ ಕಾರ್ಯ; ಲೋಹ ಕಾರಣ ಕತ್ತಿ ಕಾರ್ಯ;

ಕಾರ್ಯ-ಕಾರಣ ಒಂದೇ ಎನ್ನುವುದು ತಾತ್ಪರ್ಯ. ಒಂದನ್ನು ಅರಿಯುವುದು ಮತ್ತೊಂದನ್ನು ಅರಿತಂತೆ. ಒಂದೇ ವಸ್ತು ಅನೇಕ ಪರಿಣಾಮಗಳಿಂದ ಕಾಣಿಸಿದಾಗ ಭೇದವೆನ್ನುವುದು ಕೇವಲ ಹೆಸರಿನಲ್ಲಿ ಉಳಿದುಕೊಳ್ಳುತ್ತದೆ.''

''ಇದರಿಂದ ಏನು ಹೇಳಿದಂತಾಯಿತು? ಈ ಪ್ರಪಂಚ ಒಂದು ಕಾರ್ಯ; ಇದಕ್ಕೆ ಕಾರಣ ಸತ್ ಎಂಬ ವಸ್ತು. ಅದೇ 'ಸದ್ವಸ್ತು'. ಅದು ಸೂಕ್ಷ್ಮ, ನಿರ್ವಿಶೇಷ ಸರ್ವಗತ, ನಿರಂಜನ, ಅದೊಂದು ಅವಯವವಿಲ್ಲದ ಚೈತನ್ಯ. ಕಾರ್ಯವಾದ ಪ್ರಪಂಚವೂ ಕಾರಣವಾದ ಸದ್ವಸ್ತುವೂ ಒಂದೇ!''

''ಮಗು, ನೆನಪಿಡು. ಅಸತ್ತು ಎಂದರೆ ಏನೂ ಇಲ್ಲದ ಸ್ಥಿತಿ; ಶೂನ್ಯ. ಶೂನ್ಯದಿಂದ ಪ್ರಪಂಚ ಮೊದಲುಗೊಂಡಿತು ಎನ್ನುವುದು ತಪ್ಪು. ಮೊದಲು ಮಣ್ಣಾಗಿದ್ದುದು ಅನಂತರ ಅನೇಕ ರೂಪದ ಪಾತ್ರೆಯಾಯಿತು ಎಂದು ಹೇಳುವಂತೆ ಸದ್ವಸ್ತುವೇ ಪ್ರಪಂಚವಾಯಿತು. ಚೇತನವಾದುದರಿಂದ ಸದ್ವಸ್ತುವು 'ಬ್ರಹ್ಮವಾಗುವೆನು, ಉತ್ಪನ್ನವಾಗುವೆನು' ಎಂದು ಚಿಂತಿಸಿದ್ದರ ಪರಿಣಾಮವಾಗಿ ತೇಜಸ್ಸು ಹುಟ್ಟಿತು, ಆಕಾಶ ಹುಟ್ಟಿತು, ವಾಯು ಹುಟ್ಟಿತು, ತೇಜಸ್ಸು ತಾನು ಬಹುವಾಗುವೆನು ಉತ್ಪನ್ನವಾಗುವೆನು ಎಂದು ಯೋಚಿಸುತ್ತ ನೀರನ್ನು ಸೃಷ್ಟಿಸಿತು. ನೀರು ತಿರುಗಿ ಅದೇ ಕ್ರಮದಲ್ಲಿ ಹಂಬಲಿಸುತ್ತ ಅನ್ನದ ಸೃಷ್ಟಿ ಮಾಡಿತು. ಅನ್ನ ಅಂದರೆ ಭೂಮಿ.'' *(ಛಾಂದೋಗ್ಯ, ಅಧ್ಯಾಯ 6, ಖಂಡಗಳು 1-2)*

''ಶ್ವೇತಕೇತು, ನೆನಪಿರಲಿ; ನಮ್ಮ ಈ ದೇಹವೆನ್ನುವುದು ಸಮಪ್ರಮಾಣದ ಮೂರು ಧಾತುಗಳ ಪರಿಣಾಮ. ಅನ್ನ, ನೀರು, ತೇಜಸ್ಸುಗಳೇ ಆ ಮೂರು. ಅದು ಹೇಗೆ ಅನ್ನುತ್ತೀಯಾ? ನಾವು ತಿಂದ ಅನ್ನ ಮೂರು ಬಗೆಯಾಗುತ್ತದೆ. ಅನ್ನದಲ್ಲಿಯ ಸ್ಥೂಲಭಾಗ ಮಲವಾಗುತ್ತದೆ, ಮಧ್ಯಮ ಧಾತು ಮಾಂಸವಾಗುತ್ತದೆ, ಸೂಕ್ಷ್ಮವಾದುದು ಮನಸ್ಸಾಗುತ್ತದೆ.''

''ನೀರಿಗೂ ಇದೇ ಪರಿಣಾಮ. ಸ್ಥೂಲಧಾತು ಮೂತ್ರವಾಗಿ ಮಧ್ಯಮ ಧಾತು ರಕ್ತವಾಗಿ ಸೂಕ್ಷ್ಮಧಾತು ಪ್ರಾಣವಾಗುತ್ತದೆ. ಇನ್ನೂ ನಾವು ಭುಂಜಿಸುವ ಎಣ್ಣೆ, ತುಪ್ಪ ಮೊದಲಾದ ತೇಜೋರೂಪಗಳನ್ನೂ ನೋಡು. ಸ್ಥೂಲದಾತು ಮೂಳೆಯಾಗುತ್ತದೆ, ಮಧ್ಯಮಧಾತು ಮಜ್ಜೆಯಾಗುತ್ತದೆ, ಸೂಕ್ಷ್ಮಧಾತು ವಾಕ್ ಆಗುತ್ತದೆ. ವಾಕ್ ಎಂದರೆ ಮಾತು. ಆದ್ದರಿಂದ ನಮ್ಮ ಇಡೀ ದೇಹ ಒಂದು ಭೌತಿಕ ಪದಾರ್ಥ. ನಮ್ಮ ಮನ ಅನ್ನಮಯ, ಪ್ರಾಣ ಆಪೋಮಯ, ಅಪಃ ಎಂದರೆ ನೀರು; ವಾಕ್ ತೇಜೋಮಯ''.

''ಮತ್ತೇನು ಯೋಚನೆ ಮಗು? ಅನ್ನ ನೀರು ತೇಜಸ್ಸು ಇವು

ಅಷ್ಟೊಂದು ಸೂಕ್ಷ್ಮರೂಪವನ್ನು ಪಡೆದು ಅದು ಹೇಗೆ ಮನಸ್ಸನ್ನೂ ಪ್ರಾಣವನ್ನೂ ಮಾತನ್ನೂ ಬೆಳೆಸುತ್ತವೆ ಎಂದೋ? ಅವು ತಮ್ಮ ಸ್ವಭಾವವನ್ನು ಮೀರದೆ ಹೇಗೆ ದುಡಿಯುತ್ತವೆ ಎಂದು ಆಶ್ಚರ್ಯ ಪಡುತ್ತಿರುವೆಯೋ?''

''ಅದನ್ನೂ ವಿವರಿಸುತ್ತೇನೆ. ಮೊಸರನ್ನು ಕಡೆಯುತ್ತೇವೆ. ಆಗ ಸೂಕ್ಷ್ಮಾಂಶ ಮೇಲೆ ಬರುತ್ತದೆ. ಅದು ಬೆಣ್ಣೆ. ಅನ್ನವನ್ನು ಭುಂಜಿಸುತ್ತೇವೆ. ಆಗ ಸೂಕ್ಷ್ಮಾಂಶ ಮೇಲೇರುತ್ತದೆ. ಅದೇ ಮನಸ್ಸು. ಅಂದರೆ. ಭುಂಜಿಸಿದ ಅನ್ನದ ಸೂಕ್ಷ್ಮ ಭಾಗವು ಮನಸ್ಸಿನ ಅವಯವದೊಡನೆ ಸೇರುತ್ತದೆ. ಮನಸ್ಸು ಬೆಳೆಯುತ್ತದೆ. ಹಾಗೆಯೇ ನೀರು, ಹಾಗೆಯೇ ತೇಜಸ್ಸು.''

''ಶ್ವೇತಕೇತು, ಮತ್ತೇನು ಅನುಮಾನ? ಮನಸ್ಸು ಮಾತ್ರ ಅನ್ನಮಯ. ಪ್ರಾಣವಾಗಲೀ, ವಾಕ್ ಅಂದರೆ ಮಾತಾಗಲೀ ಅಲ್ಲ. ಏಕೆ ಹೀಗೆ ಎನ್ನುವ ಸಂದೇಹವೋ?

''ಇಲ್ಲಿ ಕೇಳು, ನೀನು ಹದಿನೈದು ದಿನ ಊಟವನ್ನು ಮುಟ್ಟಬೇಡ. ನೀರನ್ನು ಮಾತ್ರ ಎಷ್ಟಾದರೂ ಕುಡಿ. ನೀರು ಕುಡಿಯುತ್ತಿರುವವರೆಗೆ ಪ್ರಾಣಕ್ಕೆ ಚ್ಯುತಿಯಿಲ್ಲ. ಏಕೆಂದರೆ ಪ್ರಾಣ ಆಪೋಮಯ. ಆಪಃ ಎಂದರೆ ನೀರು.''

ಶ್ವೇತಕೇತುವಿಗೆ ತಂದೆಯ ಮಾತಿನಲ್ಲಿ ವಿಶ್ವಾಸ ಮೂಡಿತು. ಆಗಲಿ ಎಂದು ಹದಿನೈದು ದಿನಗಳ ಉಪವಾಸ ಮಾಡಿದನು. ನೀರನ್ನು ಮಾತ್ರ ಕುಡಿದುಕೊಂಡು ಬದುಕಿದನು. ಹದಿನಾರನೆಯ ದಿನ ಬಂದು ತಂದೆಯನ್ನು ಮಾತನಾಡಿಸಿದನು. ''ಈಗ ನಾನೇನು ಮಾಡಲಿ?'' ಎಂದು ಕುತೂಹಲದಿಂದ ಕೇಳಿದನು.

**ಆರುಣಿ:** ''ಈಗ ಋಕ್ಕುಗಳನ್ನು ಹೇಳು; ಯಜುರ್ವೇದದ ಮಂತ್ರಗಳನ್ನು ಹೇಳು; ಸಾಮವನ್ನು ಹೇಳು; ನೋಡೋಣ.''

**ಶ್ವೇತಕೇತು:** ''ನನ್ನ ಮನಸ್ಸಿಗೆ ಏನೇನೂ ಹೊಳೆಯುತ್ತಾ ಇಲ್ಲ.''

**ಆರುಣಿ:** ''ಮಗು, ಬೆಂಕಿ ಧಗ ಧಗಾ ಪ್ರಜ್ವಲಿಸುತ್ತದೆ. ಉರಿದು ಕೊನೆಗೆ ಮಿಣುಕು ಹುಳುವಿನಂತಹ ಕೆಂಡವೊಂದು ಉಳಿದಿರುತ್ತದೆ. ಆ ಕೆಂಡ ತನಗಿಂತ ದೊಡ್ಡದನ್ನು ಸುಡಲಾರದು. ಮನುಷ್ಯರಲ್ಲಿ ಹದಿನಾರು ಅಂಶಗಳು ಇರುತ್ತವೆ. ನಿನ್ನಲ್ಲೀಗ ಊಟವಿಲ್ಲದೆ ಒಂದು ಅಂಶ ಮಾತ್ರ ಉಳಿದಿದೆ. ಈ ಒಂದಂಶದಿಂದ ನಿನ್ನ ಮನಕ್ಕೆ ಏನೂ ಹೊಳೆಯಲಾರದು. ಹೋಗು ಮಗು. ಊಟಮಾಡಿ ಬಾ.''

ಶ್ವೇತಕೇತು ಊಟಮಾಡಿ ಬಂದನು. ತಂದೆ ಕೇಳಿದ್ದೆಲ್ಲ ಆಗ ಅವನಿಗೆ ಹೊಳೆಯತೊಡಗಿತು. ಆಗ ಆರುಣಿಯು ಮಗನಿಗೆ ಹೀಗೆ ಹೇಳಿದನು –

''ಈಗ ನೀನು ಆ ಮಿಣುಕು ಹುಳುವಿನಂತಹ ಕೆಂಡದ ಮೇಲೆ ಒಣಗಿದ ಹುಲ್ಲನ್ನು ಹಾಕಿದ್ದೀಯೆ. ಈಗ ಬೆಂಕಿ ಪ್ರಜ್ವಲಿಸತೊಡಗಿದೆ. ತನಗಿಂತ ದೊಡ್ಡದಕ್ಕೂ ಬೆಂಕಿಯ ಜ್ವಾಲೆ ಹಬ್ಬತೊಡಗಿದೆ. ಹೀಗೆ ಅನ್ನದಿಂದ ಮನೋಬಲ ಬೆಳೆಯುತ್ತದೆ. ಆದುದರಿಂದ ಮನಸ್ಸು ಅನ್ನಮಯ. ಪ್ರಾಣ ಆಪೋಮಯ. ಆಪಃ ಎಂದರೆ ನೀರು. ವಾಕ್ಕು ತೇಜೋಮಯ.'' *(ಛಾಂದೋಗ್ಯ ಅಧ್ಯಾಯ 6, ಖಂಡಗಳು 5, 6, 7.)*

''ಆದರೆ ಶ್ವೇತಕೇತು, ಈ ಮನಸ್ಸಿನ ಬಗ್ಗೆ ನೀನು ಇನ್ನೂ ಅರಿಯಬೇಕು. ಭೌತಿಕ ದೃಷ್ಟಿಯಿಂದ ಹೇಳುವುದಾದರೆ ಮನವೇ ಜೀವ. ಈ ಮನಸ್ಸೆನ್ನುವುದು ಹಗಲೆನ್ನದೆ ರಾತ್ರಿಯೆನ್ನದೆ ವಕ-ಪಕ ಕುಣಿಯುತ್ತಿರುತ್ತದೆ. ಒಂದು ಹಕ್ಕಿಯ ಕಾಲನ್ನು ಗೂಟವೊಂದಕ್ಕೆ ಕಟ್ಟಲಾಗಿದೆ ಎಂದು ಭಾವಿಸು. ಮನಸ್ಸು ಹಕ್ಕಿ. ಹಕ್ಕಿ ದಿಕ್ಕು ದಿಕ್ಕಿಗೆ ಹಾರಾಡುತ್ತದೆ, ಜಗ್ಗಾಡುತ್ತದೆ, ಕೊನೆಗೆ ತನ್ನನ್ನು ಕಟ್ಟಿದ ಗೂಟಕ್ಕೇ ಶರಣಾಗುತ್ತದೆ. ಮನಸ್ಸು ಹಾರಾಡುತ್ತದೆ. ಹೊಯ್ದಾಡುತ್ತದೆ, ಕೊನೆಗೆ ಪ್ರಾಣಕ್ಕೇ ಶರಣಾಗುತ್ತದೆ. ಒಟ್ಟಿನಲ್ಲಿ ಮನಕ್ಕೆ ಪ್ರಾಣ ಆಶ್ರಯ.''

''ಈ ಶರೀರ ಬೆಳೆಯುತ್ತದೆ; ಇದು ಹಸಿವಿನಿಂದ ಬೆಳೆಯುತ್ತದೆ; ಇದು ಬಾಯಾರಿಕೆಯಿಂದ ಬೆಳೆಯುತ್ತದೆ. ಇದರರ್ಥ ಅನ್ನ ಕಾರಣ ಶರೀರ ಕಾರ್ಯ. ಶರೀರ ಮೊಳಕೆ ಅನ್ನ ಬೇರು. ಈಗ ಅನ್ನವನ್ನು ಅಂಕುರ ಎಂದು ಭಾವಿಸು. ಅನ್ನಕ್ಕೆ ನೀರು ಬೇಕು. ಈಗ ನೀರನ್ನು ಅಂಕುರ ಎಂದು ತಿಳಿ. ನೀರಿಗೆ ತೇಜಸ್ಸು ಅಂದರೆ ಆದಿತ್ಯನು ಬೇಕು. ತೇಜಸ್ಸು ನಮ್ಮ ಕಾರ್ಯದೊಳಗೆ ಮಾತಾಗಿ ಬೆಳೆಯುತ್ತದೆ. ಈಗ ಮಾತನ್ನು ಅಂಕುರ ಎಂದು ಭಾವಿಸು. ಈ ಅಂಕುರಕ್ಕೆ ಸದ್ವಸ್ತು ಬೇರು. ಹೀಗೆ ಎಲ್ಲದಕ್ಕೂ ಸದ್ವಸ್ತುವೇ ಬೇರು. ಸದ್ವಸ್ತುವೇ ಎಲ್ಲಕ್ಕೂ ಆಶ್ರಯಸ್ಥಾನ. ಸ್ಥಾವರಕ್ಕೂ ಇದು ನಿಜ, ಜಂಗಮಕ್ಕೂ ಇದು ನಿಜ. ಅಂದರೆ, ಈ ಜಗತ್ತಿನ ಮೂಲವಾಗಿ ಸೂಕ್ಷ್ಮರೂಪದ ಯಾವ ಸದ್ವಸ್ತುವಿದೆಯೋ ಅದರಿಂದಲೇ ಜಗತ್ತು ಆತ್ಮವಂತವಾಗಿದೆ. ಅದು ಸತ್ಯ, ಅದೇ ಸತ್ಯ ಹಾಗೂ ನೀನೂ ಅದೇ. 'ತತ್ತ್ವಮಸಿ'. ನೀನು ಅದೇ ಆಗಿರುವೆ.'' *(ಛಾಂದೋಗ್ಯ ಅಧ್ಯಾಯ 6, ಖಂಡ-8.)*

''ಶ್ವೇತಕೇತು, ಇದು, ಈ ನಿಜವೆನ್ನುವುದೇನಿದೆ, ಇದು ನಮ್ಮ ದಿನನಿತ್ಯದ ಅನುಭವಕ್ಕೆ ಬರುವುದಿಲ್ಲ. ಇದಕ್ಕಾಗಿ ನಿನಗೆ ಬೇಸರವಾಗಿರಬಹುದು. ಇದನ್ನೂ ವಿವರಿಸುತ್ತೇನೆ. ನಿನಗೆ ತಿಳಿದಿದೆ ಜೇನುನೊಣಗಳು ನಾನಾ ದಿಕ್ಕಿಗೆ ಹಾರುತ್ತವೆ, ನಾನಾ ದಿಕ್ಕಿನ ಮರಕ್ಕೆ ಹೋಗುತ್ತವೆ, ನಾನಾ ದಿಕ್ಕಿನ ರಸಗಳನ್ನೂ ತರುತ್ತವೆ; ಜೇನುತುಪ್ಪ ಸಿದ್ಧವಾಗುತ್ತದೆ. ನಾನಾ ರಸಗಳು ಒಂದಾಗುತ್ತವೆ. ಆ ರಸಗಳಿಗೆ

ಆಗ ತಾನು ಅಂತಹ ಒಂದು ಮರದ ರಸ ಎನ್ನುವ ಪ್ರತ್ಯೇಕತೆ ಉಳಿದಿರುವುದಿಲ್ಲ. ಹಾಗೆಯೇ ನಮ್ಮ ಲಯ. ಮನುಷ್ಯನಿಗೆ ಯಾವ ಸ್ಥಿತಿಯಲ್ಲಿಯೂ ತನ್ನ ಮತ್ತೊಂದು ರೂಪದ ಅರಿವು ಉಳಿದಿರುವುದಿಲ್ಲ. ಆದರೆ ಲಯವಾದ ನಂತರವೂ ಕರ್ಮದ ವಾಸನೆ ನಮ್ಮನ್ನು ಬಿಟ್ಟಿರುವುದಿಲ್ಲ. ನಾವು ಅದರ ಪರಿಣಾಮವಾಗಿ ಮತ್ತೆ ಹುಟ್ಟಿಬರುತ್ತೇವೆ.''

''ನಮಗೆ ನಮ್ಮ ಮೂಲವಾದ ಹಾಗೂ ನಾವು ಲಯವಾಗುವ ಸದ್ವಸ್ತುವಿನ ನೆನಪು ಇರುವುದಿಲ್ಲ. ನದಿಗಳು ಪೂರ್ವದತ್ತ ಹರಿಯಬಹುದು, ಪಶ್ಚಿಮದತ್ತ ಧುಮುಕಬಹುದು; ಸಮುದ್ರವನ್ನು ಸೇರಿ ಸಮುದ್ರವಾಗುವ ನದಿಗಳಿಗೆ ಸಮುದ್ರದಲ್ಲಿಯೇ ಮೂಲ, ಸಮುದ್ರದೊಳಗೇ ಲಯ. ಆದರೆ ಮತ್ತೆ ಮತ್ತೆ ಪೂರ್ವಕ್ಕೆ ಹರಿದರೂ ಪಶ್ಚಿಮಕ್ಕೆ ಓಡಿದರೂ ನದಿಗಳಿಗೆ ಆ ನೆನಪಿರುವುದಿಲ್ಲ, ಗುರುತೂ ಇರುವುದಿಲ್ಲ. *(ಛಾಂದೋಗ್ಯ, ಅಧ್ಯಾಯ 6, ಖಂಡ 9, 10)*

''ಶ್ವೇತಕೇತು, ಇನ್ನೂ ಒಂದು ವಿಷಯವನ್ನು ತಿಳಿದಿರು. ಜೀವವು ಶರೀರದಿಂದ ಹೊರಗೆ ನಡೆದಾಗ ಶರೀರ ಸಾಯುತ್ತದೆ; ಜೀವ ಸಾಯುವುದಿಲ್ಲ. ಅದಕ್ಕೆ ಸಾವಿಲ್ಲ. ಕೊಡಲಿಯಿಂದ ಮರಕ್ಕೆ ಒಂದೇಟು ಹಾಕು. ಅದು ಸ್ರವಿಸುತ್ತದೆ; ಆದರೆ ಬದುಕಿ ಉಳಿಯುತ್ತದೆ. ಅದರ ತುದಿಯನ್ನು ಕಡಿ, ಅದು ಸ್ರವಿಸುತ್ತದೆ; ಆದರೆ ಬದುಕಿ ಉಳಿಯುತ್ತದೆ. ಏಕೆಂದರೆ ಆ ಮರದಲ್ಲಿ ಜೀವಾತ್ಮ ತುಂಬಿದೆ. ಏಟು ಬಿದ್ದರೂ ಅದು ಬದುಕುತ್ತ ಹರ್ಷಿಸುತ್ತದೆ.''

''ಜೀವವು ಮರದ ಕೊಂಬೆಯನ್ನು ಬಿಡಬಹುದು. ಅದರ ಕಾಂಡವನ್ನು ಬಿಡಬಹುದು. ಇಡೀ ಮರವನ್ನೇ ಬಿಡಬಹುದು. ಜೀವವು ತೊರೆದ ಭಾಗವೆಲ್ಲ ಒಣಗಿ ಸಾಯುತ್ತದೆ. ಇಡೀ ಮರವೂ ಸಾಯುತ್ತದೆ. *(ಛಾಂದೋಗ್ಯ, ಅಧ್ಯಾಯ 6, ಖಂಡ 11)*

ಆದರೆ ಶ್ವೇತಕೇತುವಿನ ಸಂದೇಹ ಪೂರ್ತಿ ಹೋಗಲಿಲ್ಲ. ''ತಂದೆಯೇ, ಪೃಥ್ವಿ ಸ್ಥೂಲ, ಪ್ರಪಂಚ ಸ್ಥೂಲ; ಆದರೆ ಆ ಸದ್ವಸ್ತು ಸೂಕ್ಷ್ಮವಾದುದು. ಆದರಿಂದ ಇದು ಎನ್ನುವುದು ಹೇಗೆ? ಪೃಥ್ವಿಗೆ ನಾಮವಿದೆ, ರೂಪವಿದೆ; ಪ್ರಪಂಚಕ್ಕೆ ನಾಮವಿದೆ ರೂಪವಿದೆ. ಆದರೆ ಸದ್ವಸ್ತು ನಾಮರಹಿತ. ರೂಪರಹಿತ. ಆದರಿಂದ ಇದು ಹೇಗೆ?

**ಆರುಣಿ :** ಮಗು, ನೋಡು ಅದೊಂದು ದೊಡ್ಡ ಆಲದ ಮರ.

**ಶ್ವೇತಕೇತು :** ಹೌದು.

**ಆರುಣಿ :** ಅದರಲ್ಲಿ ಹಣ್ಣಿದೆಯೆ?

ಶ್ವೇತಕೇತು : ಹೌದು.

ಆರುಣಿ : ಒಂದನ್ನು ಇಲ್ಲಿಗೆ ತಾ

ಶ್ವೇತಕೇತು : ಒಂದನ್ನು ಕೊಯ್ದು ತಂದೆನು.

ಆರುಣಿ : ಒಡೆ.

ಶ್ವೇತಕೇತು : ಒಡೆದೆ.

ಆರುಣಿ : ಈಗ ಏನು ಕಾಣುತ್ತಿದೆ ?

ಶ್ವೇತಕೇತು : ಅಣುಪ್ರಮಾಣದ ಬೀಜಗಳು.

ಆರುಣಿ : ಒಂದನ್ನು ಒಡೆ.

ಶ್ವೇತಕೇತು : ಒಡೆದೆ.

ಆರುಣಿ : ಈಗ ?

ಶ್ವೇತಕೇತು : ಏನೂ ಕಾಣಿಸುತ್ತಿಲ್ಲ !

ಆರುಣಿ : ನಿನಗೆ ಏನೂ ಕಾಣಿಸಲಿಲ್ಲ ! ಆದರೆ ಅಲ್ಲಿಂದಲೇ ಅಷ್ಟೊಂದು ದೊಡ್ಡ ಮರದ ರೂಪಧಾರಣೆಯಾಗಿದೆ. ಅದಕ್ಕೆ ಅಲ್ಲಿಂದಲೇ ಆ ರೂಪ.

ಶ್ವೇತಕೇತು : ಆದರೆ ಬೀಜ ಇಷ್ಟಾದರೂ ಕಾಣಿಸಿದೆ. ಸದ್ವಸ್ತು ಕಾಣಿಸುವುದೇ ಇಲ್ಲ !

ಆರುಣಿ : ಮಗು, ನಿನ್ನ ಸಂದೇಹ ಸರಿ. ಆದರೆ ತಿಳಿದವನಿಗೆ ಈ ಸಂದೇಹ ಉಳಿಯಲಾರದು. ಈಗ ಈ ಉಪ್ಪಿನ ಹರಳನ್ನು ಆ ಪಾತ್ರೆಯ ನೀರಿನಲ್ಲಿ ಮುಳುಗಿಸು. ಹೊತ್ತು ಮೂಡಿದಾಗ ಇಲ್ಲಿಗೆ ಬಾ.

ಶ್ವೇತಕೇತು ಹಾಗೆಯೇ ಮಾಡಿ ಮಾರನೆಯ ದಿನ ಮುಂಜಾನೆ ಅಲ್ಲಿಗೆ ಬಂದನು. ಆರುಣಿಯು ಮುಳುಗಿಸಿದ ಆ ಉಪ್ಪಿನ ಹರಳನ್ನು ತರುವಂತೆ ಸೂಚಿಸಿದನು. ಆದರೆ ಶ್ವೇತಕೇತುವಿಗೆ ನೀರಿನೊಳಗೆ ಉಪ್ಪಿನ ಹರಳು ಕಾಣಿಸಲಿಲ್ಲ.

ಆರುಣಿ : ಮಗು, ಹಾಗಾದರೆ ಈಗ ಆ ನೀರಿನ ನಾಲ್ಕು ಹನಿಗಳನ್ನು ನಾಲಿಗೆಯ ಮೇಲೆ ಬಿಟ್ಟುಕೊ.

ಶ್ವೇತಕೇತು : ಕುಡಿದೆ, ಉಪ್ಪಾಗಿದೆ.

ಆರುಣಿ : ಈಗ ಪಾತ್ರೆಯ ಮಧ್ಯಭಾಗದ ನಾಲ್ಕು ಹನಿ ನೀರನ್ನು ಕುಡಿ.

ಶ್ವೇತಕೇತು : ಕುಡಿದೆ, ಉಪ್ಪಾಗಿದೆ.

ಆರುಣಿ : ಮಗು, ಈಗ ಈ ಪಾತ್ರೆಯ ನೀರನ್ನು ಹೊರಗೆ ಚೆಲ್ಲು.

ಶ್ವೇತಕೇತು : ನೀರನ್ನು ಹೊರಗೆಸೆದು ಬಂದೆನು.

ಆರುಣಿ : ಮಗು, ಉಪ್ಪು ನೀರಿನಲ್ಲಿಯೇ ಇದೆ. ನಿನಗೆ ಅದು ಕಾಣ

ಲಿಲ್ಲ. ನೀನು ಅರಿತೆ. *(ಛಾಂದೋಗ್ಯ, ಅಧ್ಯಾಯ 6, ಖಂಡಗಳು 12, 13)*

**ಶ್ವೇತಕೇತು :** ಇದೇನೋ ಸರಿ. ಆದರೆ ಸದ್ವಸ್ತುವನ್ನು ಅರಿಯುವುದು ಹೇಗೆ? ಇಂದ್ರಿಯಗಳಿಗಂತೂ ಸದ್ವಸ್ತು ಸಿಗದು!

**ಆರುಣಿ :** ಗಾಂಧಾರದ ಒಬ್ಬ ಮನುಷ್ಯ. ಅವನ ಕಣ್ಣು ಕಟ್ಟಲಾಯಿತು. ಎಳೆದು ತಂದು ಕಾಡಿನಲ್ಲಿ ಬಿಡಲಾಯಿತು. ಅವನು ಆ ದಿಕ್ಕಿಗೆ ತಿರುಗುತ್ತಾನೆ, ಈ ದಿಕ್ಕಿಗೆ ತಿರುಗುತ್ತಾನೆ, ಹೋ ಎಂದು ಅರಚುತ್ತಾನೆ, ಗೋಳಾಡುತ್ತಾನೆ. ಆಗ ಒಬ್ಬ ಕರುಣಾಳು ಬರುತ್ತಾನೆ; ಕಟ್ಟು ಬಿಚ್ಚುತ್ತಾನೆ, ಕಣ್ಣನ್ನು ಕೊಡುತ್ತಾನೆ. ಎಲ್ಲಿಗೆ? ಗಾಂಧಾರಕ್ಕೊ? ಈ ದಿಕ್ಕು – ಎಂದು ತೋರಿಸುತ್ತಾನೆ. ಆ ದಿಕ್ಕಿಗೆ ಬೆರಳು ಮಾಡುತ್ತಾನೆ ಅಷ್ಟೆ. ಶ್ರದ್ಧೆಯಿಟ್ಟು ಆ ದಿಕ್ಕಿನಲ್ಲಿ ಹೆಜ್ಜೆಯಿಡುತ್ತ ಕೇಳುತ್ತ ಕೇಳುತ್ತ ಕೊನೆಗೆ ಅವನು ಗಾಂಧಾರವನ್ನು ತಲುಪುತ್ತಾನೆ. ಹೀಗೆ ಆಚಾರ್ಯನು ಸದ್ವಸ್ತುವಿನ ಕಡೆಗೆ ಬೆರಳನ್ನು ತೋರುತ್ತಾನೆ.

**ಶ್ವೇತಕೇತು :** ಆಚಾರ್ಯನು ತೋರಿದ ದಿಕ್ಕಿನಲ್ಲಿ ಹೋಗುವ ಕ್ರಮ ವಾದರೂ ಹೇಗೆ?

**ಆರುಣಿ :** ಒಬ್ಬ ರೋಗಿ. ಅವನು ಸಾಯಬೇಕಾದವನು. ಸುತ್ತಲೂ ಬಂಧುಗಳು ಬಂದು ನಿಲ್ಲುತ್ತಾರೆ. ''ನಾನು ಯಾರು, ಹೇಳು ನೋಡೋಣ?'' – ಎಂದು ಮಾತನಾಡಿಸುತ್ತಾರೆ. ಎಲ್ಲಿಯವರೆಗೆ ರೋಗಿಯ ಮಾತು ಮನಸ್ಸಿನಲ್ಲಿ, ಮನಸ್ಸು ಪ್ರಾಣದಲ್ಲಿ, ಪ್ರಾಣ ತೇಜಸ್ಸಿನಲ್ಲಿ, ತೇಜಸ್ಸು ಸದ್ವಸ್ತುವೆಂಬ ದೇವತೆಯಲ್ಲಿ ಲಯವಾಗುವುದಿಲ್ಲವೋ ಅಲ್ಲಿಯ ವರೆಗೆ ರೋಗಿಯು ಸುತ್ತುಗಟ್ಟಿದವರನ್ನು ಗುರುತಿಸುತ್ತಾನೆ. ಲಯವಾದ ಮೇಲೆ ಅವನು ಯಾರನ್ನೂ ಗುರುತಿಸುವುದಿಲ್ಲ. ಇದು ಸಾವಿನ ಕ್ರಮ ಇದು ಅರಿತವನ ಸತ್ಸಂಪತ್ತಿಕ್ರಮವೂ ಹೌದು. *(ಛಾಂದೋಗ್ಯ, ಅಧ್ಯಾಯ 6, ಖಂಡಗಳು 14, 15)*

ಶ್ವೇತಕೇತು ಮತ್ತೆ ಗೊಂದಲಕ್ಕೊಳಗಾದನು. ಸಂಸಾರಿಗೂ ಅದೇ ಕ್ರಮ! ಮುಮುಕ್ಷುವಿಗೂ ಅದೇ ಕ್ರಮ! ಮೋಕ್ಷ ಬೇಡದವನಿಗೂ, ಮೋಕ್ಷ. ಬೇಕಾದವನಿಗೂ ಒಂದೇ ಕ್ರಮ! ಇದು ಹೇಗೆ? ಎಂದು ತನ್ನ ಸಂದೇಹವನ್ನು ತಂದೆಯ ಮುಂದಿರಿಸಿದನು.

**ಆರುಣಿ :** ಇದು ನಿಜವಾದ ಪ್ರಶ್ನೆ. ರಾಜಭಟರು ಒಬ್ಬನನ್ನು ಬಂಧಿಸುತ್ತಾರೆ. ಆತನ ಮೇಲೆ ಕಳ್ಳತನದ ಆರೋಪವಿದೆ. ತಾನು ಕದ್ದಿಲ್ಲ ಎನ್ನುತ್ತಾನೆ ಅವನು. ಹಾಗಾದರೆ ಪರೀಕ್ಷೆಯಾಗಲಿ, ದಿವ್ಯವೇ ನಡೆಯಲಿ ಎನ್ನುತ್ತಾರೆ. ಕೊಡಲಿಯನ್ನು ಕೆಂಪಗೆ ಕಾಯಿಸಲಾಗುತ್ತದೆ. ಆಪಾದಿತನು ಸುಳ್ಳು

ಹೇಳಿದ್ದರೆ ಆ ಸುಳ್ಳು ತನ್ನನ್ನು ಕಾಪಾಡುತ್ತದೆ ಎಂದು ತಿಳಿದಿರುತ್ತಾನೆ. ಆದರೆ ಕೊಡಲಿಯನ್ನು ಮುಟ್ಟಿದಾಗ ಕೊಡಲಿ ಅವನನ್ನು ಸುಡುತ್ತದೆ. ಅವನನ್ನು ಥಳಿಸಲಾಗುತ್ತದೆ. ಅವನು ಕಳ್ಳನಲ್ಲ ಎಂದಿರಲಿ. ''ನಾನು ಕಳ್ಳತನ ಮಾಡಿಲ್ಲ'' ಎನ್ನುವ ವಾದದಿಂದ ತನ್ನನ್ನು ಅವನು ಸತ್ಯವಾದಿಯನ್ನಾಗಿ ಮಾಡಿಕೊಳ್ಳುತ್ತಾನೆ. ಸತ್ಯವು ತನ್ನನ್ನು ರಕ್ಷಿಸುತ್ತದೆ ಎಂದು ನಂಬುತ್ತಾನೆ. ಕೊಡಲಿ ಅವನನ್ನು ಸುಡಲಾರದು. ಅವನ ಬಿಡುಗಡೆಯಾಗುತ್ತದೆ.

ಕೊಡಲಿ ಒಂದೇ. ಮುಟ್ಟುವ ಕ್ರಮವೂ ಒಂದೇ. ಆದರೆ ಪರಿಣಾಮ ಬೇರೆ. ಸಂಸಾರಿಯ ಹಾಗೂ ಮುಮುಕ್ಷುವಾದ ಜ್ಞಾನಿಯ ಕ್ರಮಗಳು ಒಂದೇ. ಆದರೆ ಪರಿಣಾಮ ಬೇರೆ.

ಮಗು ಶ್ವೇತಕೇತು, ಒಟ್ಟಿನಲ್ಲಿ ಸಾರಾಂಶ ಇಷ್ಟು: ಪ್ರಪಂಚ ಆತ್ಮವಂತವಾದುದು. ಸದ್ವಸ್ತುವೇ ಆ ಆತ್ಮ. ಅದು ಸತ್ಯ, ಅದೇ ಸತ್ಯ. ಅದು ನೀನೇ. ''ತತ್ ತ್ವಮ್ ಅಸಿ'' ಶ್ರದ್ಧೆಯಿರಲಿ; ಶ್ವೇತಕೇತು ಶ್ರದ್ಧೆಯಿರಲಿ.

ಶ್ವೇತಕೇತುವಿಗೆ ಈಗ ಅರಿವಾಯಿತು. ತಾನು ದೇಹ ಮಾತ್ರನಲ್ಲ, ಜೀವಮಾತ್ರನಲ್ಲ, ತಾನು ಸದ್ವಸ್ತು. ಅರಿತಾಗ ತಾನೇ ಸದ್ವಸ್ತು. *(ಛಾಂದೋಗ್ಯ, ಅಧ್ಯಾಯ 6, ಖಂಡ 16)*

* * *

— ಎರಡು —

## ನಾರದ ಮತ್ತು ಸಂತ ಸನತ್ಕುಮಾರ

ಆತ್ಮಜ್ಞಾನ ದೊಡ್ಡದು. ಅದರಲ್ಲಿ ನಿರತಿಶಯವಾದ ಶ್ರೇಯಸ್ಸು ಅಡಗಿದೆ. ಆತ್ಮಜ್ಞಾನವನ್ನು ಗಳಿಸುವುದೇ ಪರವಿದ್ಯೆ. ಶ್ರೇಷ್ಠವಾದ ವಿದ್ಯೆ. ಪರಮಾತ್ಮ ಬೇರೆ ಅಲ್ಲ, ಜೀವಾತ್ಮ ಬೇರೆ ಅಲ್ಲ. ಅದೊಂದು ಅರಿವು, ಅದೊಂದು ದರ್ಶನ. ಒಂದೇ ಎಂಬ ದರ್ಶನ ಅದು. 'ಸತ್' ಎನ್ನುವ ಪದದಿಂದ ದಾರ್ಶನಿಕರು ಗುರುತಿಸುವ ಪರಮಾತ್ಮನು ಭೌಮನಾಗಿದ್ದಾನೆ, ನಿರತಿಶಯನಾಗಿದ್ದಾನೆ; ಅವನೇ ಪರಬ್ರಹ್ಮ; ಅವನೇ ಸತ್ಯ; ಅವನು ಅದು; ಅದೇ ಸುಖ. ಅದಕ್ಕಿಂತ ಅಲ್ಪವಾದುದರಲ್ಲಿ ಸುಖವಿಲ್ಲ. ''ಯೋ ವೈ ಭೂಮಾ ತತ್ ಸುಖಂ, ನಾಲ್ಪೇ ಸುಖಮಸ್ತಿ'' (ಛಾಂದೋಗ್ಯ, ಅಧ್ಯಾಯ 7, ಖಂಡ 23.)

ಸಂತ ಸನತ್ಕುಮಾರ ಇದನ್ನೆಲ್ಲ ಅರಿತಿದ್ದನು. ವೇದ, ವೇದಾಂಗ ಹಾಗೂ ಆ ಕಾಲದ ಸರ್ವವಿದ್ಯೆಗಳನ್ನು ಅರಿತ ನಾರದನಿಗೆ ಸಂತ ಸನತ್ಕುಮಾರನು ಅರಿತಿದ್ದ ಭೌಮವು ತಿಳಿದಿರಲಿಲ್ಲ. ಭೌಮವಾದುದು ಮಾತ್ರ ಸುಖ ಎಂದು ನಾರದನು ಕೇಳಿದ್ದನು. ಅದಕ್ಕಾಗಿ ಸನತ್ಕುಮಾರನನ್ನು ಅರಸುತ್ತ ಅವನ ಬಳಿಗೆ ತಲುಪಿದನು. ಸಂತನಿಗೆ ವಂದಿಸುತ್ತ ಕೇಳಿಕೊಂಡನು –

> ''ಭಗವನ್, ನಾನು ತಿಳಿಯದ ವಿದ್ಯೆಯಿಲ್ಲ. ಅವುಗಳ ಪ್ರಯೋಗದಲ್ಲಿಯೂ ನನಗೆ ಪರಿಣತಿಯಿದೆ. ವೇದ ವೇದಾಂಗಗಳು ನೀತಿಶಾಸ್ತ್ರ ನಿಧಿಶಾಸ್ತ್ರ ಸರ್ಪವಿದ್ಯೆ ಪರಿಮಳ ದ್ರವ್ಯಗಳ ತಯಾರಿಕೆ ನೃತ್ಯ ಸಂಗೀತ ವಾದ್ಯ ಶಿಲ್ಪ ಮತ್ತು ಶಾಸ್ತ್ರಗಳು – ಹೀಗೆ ಸರ್ವವಿದ್ಯಾಪಾರಂಗತ ನಾನು. ಆದರೂ ನನಗೇಕೋ ಸಮಾಧಾನವೆಂಬುದಿಲ್ಲ. ನನಗೆ ಏನೂ ತಿಳಿದಿಲ್ಲ ಎನ್ನಿಸ ತೊಡಗಿದೆ. ಈ ತಳಮಳಕ್ಕೆ ಹಾಗೂ ಶೋಕಕ್ಕೆ ಶಾಂತಿ ಇಲ್ಲವೇ ? ಆತ್ಮವನ್ನು ಅರಿತವರು ಶೋಕವನ್ನು ದಾಟುತ್ತಾರೆ ಎಂದು ಕೇಳಿದ್ದೇನೆ. ಭಗವನ್, ನನ್ನನ್ನು ಉದ್ಧರಿಸಬೇಕು.''

ಸಂತ ಸನತ್ಕುಮಾರನಿಗೆ ನಾರದನ ಸಮಸ್ಯೆ ಅರ್ಥವಾಯಿತು. ವಾಸ್ತವವಾಗಿ ನಾರದ ಎಲ್ಲವನ್ನೂ ತಿಳಿದವನು. ಸರ್ವವಿದ್ಯೆಗಳ ಬೆನ್ನು ಹತ್ತಿ ತುದಿ ಮುಟ್ಟಿದವನು; ಋಷಿ, ಗೌರವಾನ್ವಿತ, ಆದರೆ ವಿದ್ಯೆಗಳ ವಿದ್ಯೆಯಾದ ಪರವಿದ್ಯೆ ಎಂಬ ಆತ್ಮವಿದ್ಯೆ ಇವನಿಗೆ ತಿಳಿದಿರಲಿಲ್ಲ. ಓ ಆ ಮರವನ್ನು ನೋಡು, ಆ ಕೊಂಬೆಯ ತುದಿಯಲ್ಲಿ ಒಂದು ಹಣ್ಣಿದೆ. ಹಾಂ, ಕಂಡಿತೇ ? ಅದೇ ಹಣ್ಣು. ಆದರೆ ಅದು ಹಣ್ಣಲ್ಲ. ಅದು ಆಕಾಶದ ಚಂದ್ರ ಎಂದು ಮಕ್ಕಳಿಗೆ ತಿಳಿಸುವಂತೆ ಶಾಖಾ ಚಂದ್ರಮ ನ್ಯಾಯವನ್ನು ಬಳಸಿ ನಾರದನಿಗೆ ಆತ್ಮಜ್ಞಾನದ ಭೌಮವಿದ್ಯೆಯನ್ನು ತಿಳಿಸಿಕೊಡಲು ಸಂತ ಸನತ್ಕುಮಾರನು ಯೋಚಿಸಿದನು-

**ಸನತ್ಕುಮಾರ :** ನೀನು ಏನೇನು ಅರಿತಿರುವೆಯೋ ಅವೆಲ್ಲ ಬರಿಯ ನಾಮಗಳು; ಹೆಸರುಗಳು ಅವು. ಅವುಗಳ ಉಪಾಸನೆ ಮಾಡಿ ಬೆನ್ನು ಹತ್ತಿ ಅರಿಯುವುದು ತಪ್ಪಲ್ಲ. ಅವುಗಳನ್ನೇ ಬ್ರಹ್ಮ ಎಂದು ನೀನು ಉಪಾಸನೆ ಮಾಡಬಹುದು.

**ನಾರದ :** ಹಾಗಾದರೆ, ನಾಮಕ್ಕಿಂತ ಹೆಚ್ಚಿನದು ಇಲ್ಲವೇ ?

**ಸನತ್ಕುಮಾರ :** ಯಾಕಿಲ್ಲ ? ನಾಮ ಎಂದರೆ ಬರಿಯ ವಿವರಗಳು ನಾಮಕ್ಕಿಂತ ದೊಡ್ಡದು ವಾಕ್ಕು. ವಾಕ್ ಮಾತು. ವಾಕ್ ವಾಙ್ಮಯ. ನೋಡು, ನೀನು ತಿಳಿದ ವಿದ್ಯೆಗಳನ್ನು ಭೂಮಿ ಸ್ವರ್ಗ ವಾಯು ಆಕಾಶ ನೀರು

ತೇಜಸ್ಸುಗಳನ್ನು ಕ್ರಿಮಿ ಕೀಟದಿಂದ ಹಿಡಿದು ದೇವತೆಗಳವರೆಗೆ ಧರ್ಮಾಧರ್ಮ ದಿಟ-ಸಟೆಗಳ ತನಕ ಹಾಗೂ ರೂಪ-ಅರೂಪಗಳನ್ನೂ ಮಾತು ತಿಳಿಸುತ್ತದೆ. ಈ ಪ್ರಪಂಚ ವಾಙ್ಮಯವಾಗಿದೆ. ಆದ್ದರಿಂದ ವಾಕ್ಕು ದೊಡ್ಡದು. ವಾಕ್ಕನ್ನು ಅಂದರೆ ಮಾತನ್ನು ಉಪಾಸಿಸು.

ನಾರದ: ಹಾಗಾದರೆ ಮಾತನ್ನು ಮೀರಿದುದು ಇಲ್ಲ!

ಸನತ್ಕುಮಾರ: ವಾಕ್ಕಿಗಿಂತ ಮನಸ್ಸು ಮಿಗಿಲಾದುದು. ಎರಡು ನೆಲ್ಲಿಕಾಯಿಗಳನ್ನೋ ಎರಡು ತಾರೆ ಕಾಯಿಗಳನ್ನೋ ಹಿಡಿದ ಮುಷ್ಟಿಯು ಹೇಗೆ ಅವುಗಳಿಗಿಂತ ದೊಡ್ಡದೋ ಹಾಗೆಯೇ ವಾಕ್ಕು ಮತ್ತು ನಾಮ ಅಡಕವಾಗಿರುವ ಮನಸ್ಸೇ ದೊಡ್ಡದು. ಒಬ್ಬನು ಮನಸ್ಸು ಮಾಡಿದಾಗ 'ನಾನು ಓದುತ್ತೇನೆ' ಎಂದುಕೊಳ್ಳುತ್ತಾನೆ. ಮನಸ್ಸಿನಿಂದ ಮಾತು ಮತ್ತು ನಾಮ. ನೀನು ಮನಸ್ಸಿನ ಉಪಾಸನೆ ಮಾಡು. ಮನವು ಅಂತಃಕರಣದ ಶಕ್ತಿ.

ನಾರದ: ಹಾಗಾದರೆ ಮನಸ್ಸು ಎಲ್ಲಕ್ಕಿಂತ ದೊಡ್ಡದಾಗಿದೆ, ಆಳವಾಗಿದೆ ಮತ್ತು ಮೇಲಿನದಾಗಿದೆ.

ನಾರದ: ನನ್ನ ಅಭಿಪ್ರಾಯ ಹಾಗಿಲ್ಲ. ಮನಸ್ಸಿಗಿಂತ ಸಂಕಲ್ಪವು ದೊಡ್ಡದು. ಸಂಕಲ್ಪವು ಅಂತಃಕರಣದ ಒಂದು ವೃತ್ತಿ. ಇದು ಮಾಡಬೇಕು ಅಥವಾ ಮಾಡಬಾರದು ಎನ್ನುವ ನಿರ್ಣಯವನ್ನು ತೆಗೆದುಕೊಳ್ಳುತ್ತದೆ. ನಾನು ಯಾವಾಗ ಸಂಕಲ್ಪ ಮಾಡುತ್ತೇನೆಯೋ ಆಗಲೇ ನಾನು ಮನಸ್ಸು ಮಾಡಲು ಸಾಧ್ಯ. ಮನಸ್ಸು ಮಾಡಿದ ನಂತರ ವಾಕ್ಕನ್ನು ಉತ್ತೇಜಿಸಿ ವಾಕ್ಕಿನಿಂದ ನಾಮವನ್ನು ಉಚ್ಚರಿಸುತ್ತೇನೆ. ನಾಮದಿಂದ ಚಟುವಟಿಕೆ. ಈ ನಾಮಗಳಲ್ಲಿ ಚಟುವಟಿಕೆ ಒಂದಾಗುತ್ತದೆ. ಈ ಎಲ್ಲದಕ್ಕೂ ಸಂಕಲ್ಪವೇ ತಳಹದಿ. ಸಂಕಲ್ಪದ ಏಕಮಾತ್ರ ಗತಿಯಲ್ಲಿ ಎಲ್ಲವೂ ಘಟಿಸಬೇಕು. ಸ್ವರ್ಗವು ಸಂಕಲ್ಪಿಸಿತು, ಭೂಮಿ ಸಂಕಲ್ಪಿಸಿತು, ವಾಯು ಆಕಾಶಗಳು ಸಂಕಲ್ಪಿಸಿದವು, ನೀರು ಸಂಕಲ್ಪಿಸಿತು, ತೇಜಸ್ಸು ಸಂಕಲ್ಪಿಸಿತು; ಈ ಸಂಕಲ್ಪಗಳಿಂದ ಮಳೆ, ಮಳೆಯ ಸಂಕಲ್ಪದಿಂದ ಬೆಳೆ, ಅನ್ನ, ಅನ್ನದ ಸಂಕಲ್ಪದಿಂದ ಪ್ರಾಣಿಗಳ ಸಂಕಲ್ಪ. ಪ್ರಾಣಿ ಪ್ರಾಣ. ಲೋಕವೇ ಒಂದು ಮಹಾಸಂಕಲ್ಪ. ಸಂಕಲ್ಪವನ್ನೇ ಉಪಾಸಿಸು.

ನಾರದ: ಹಾಗಾದರೆ ಸಂಕಲ್ಪ ಎಲ್ಲದಕ್ಕಿಂತಲೂ ಮಿಗಿಲಾದುದು.

ಸನತ್ಕುಮಾರ: ಅಲ್ಲ, ಸಂಕಲ್ಪಕ್ಕಿಂತ ಚಿತ್ತ ಮಿಗಿಲಾದುದು. ಇದು ವಸ್ತುವನ್ನು ಒಂದು ಸರಿಯಾದ ಸಮಯದಲ್ಲಿ ಅರಿಯುವ ವಿವೇಚನೆ ಎಂಬ ಶಕ್ತಿ. ಕಳೆದುಹೋದ ಮತ್ತು ಮುಂಬರುವ ಘಟನೆಗಳನ್ನು ಹೊಂದಿಸಿಕೊಳ್ಳುತ್ತ ಇದು ನಿರ್ಧರಿಸಬಲ್ಲುದು. ನನ್ನ ಚಿತ್ತವು ಅರಿತು ನಿರ್ಧರಿಸಿದಾಗ ನಾನು

ಸಂಕಲ್ಪಿಸಲು ಸಮರ್ಥನಾಗುತ್ತೇನೆ. ಒಬ್ಬನನ್ನು ಬಹು ಓದಿದವನೆಂದು ತಿಳಿ. ಅವನು ಚಿತ್ತರಹಿತನಾಗಿದ್ದರೆ ಅವನು ಇದ್ದೂ ಇಲ್ಲ. ಅವನ ಓದು ಹಾಳು. ಅವನು ಕಿಂಚಿತ್ತಾದರೂ ಚಿತ್ತವಂತನಾಗಿದ್ದರೆ ಅವನ ಮಾತನ್ನು ಆಲಿಸಬೇಕು ಎನ್ನಿಸುತ್ತದೆ. ಚಿತ್ತದ ಈ ಮಹಿಮೆಯಿಂದಾಗಿ ಚಿತ್ತವನ್ನೇ ನೀನು ಉಪಾಸಿಸು.

ನಾರದ : ಚಿತ್ತಕ್ಕಿಂತಲೂ ಮಿಗಿಲಾದುದೇ ಇಲ್ಲ !

ಸನತ್ಕುಮಾರ : ಧ್ಯಾನ; ಧ್ಯಾನ ಮಿಗಿಲಾದುದು. ಧ್ಯಾನ ಏಕಾಗ್ರಸ್ಥಿತಿ. ಅದರಲ್ಲಿ ಯಾವುದೂ ತುಂಡಾಗುವುದಿಲ್ಲ. ಭೂಮಿಯನ್ನು ನೋಡು, ಆಕಾಶವನ್ನು ನೋಡು ಸ್ವರ್ಗವನ್ನು ನೋಡು, ಎಲ್ಲವೂ ಧ್ಯಾನಿಸುತ್ತ ನಿಂತಿವೆ; ಧ್ಯಾನವಿಲ್ಲದೆ ಚಿತ್ತವಿಲ್ಲ, ಚಿತ್ತವಿಲ್ಲದೆ ಸಂಕಲ್ಪವಿಲ್ಲ. ಹೀಗೇ ತಿಳಿಯುತ್ತ ಹೋಗು. ಈ ಲೋಕದಲ್ಲಿ ನಿನಗೆ ಮಹಿಮಾಸಂಪನ್ನರಾಗಿ ಯಾರು ಕಾಣುತ್ತಾರೊ ಅವರ ಮಹಿಮೆ ಅವರ ಧ್ಯಾನದ ಫಲ. ಧ್ಯಾನವಿಲ್ಲದವನು ಕ್ಷುದ್ರ. ನೀನು ಧ್ಯಾನದ ಉಪಾಸನೆಯನ್ನು ಮಾಡು.

ಆದರೆ ಧ್ಯಾನವೇ ಗುರಿಯಲ್ಲ. ಗುರಿಯಲ್ಲ ಏಕೆಂದರೆ ಅದಕ್ಕಿಂತ ಮಿಗಿಲಾದುದೂ ಇದೆ. ಧ್ಯಾನಕ್ಕಿಂತ ದೊಡ್ಡದು ವಿಜ್ಞಾನ. ವಿಜ್ಞಾನವು ಶಾಸ್ತ್ರಾರ್ಥದ ಸಮ್ಯಕ್ ಅರಿವು. ವಿಜ್ಞಾನದಿಂದಲೇ ಎಲ್ಲವೂ ಮನೋಗತವಾಗುತ್ತದೆ. ಇದಿಲ್ಲದೆ ಯಾವುದೂ ಇಲ್ಲ. ಧ್ಯಾನ ಚಿತ್ತ ಸಂಕಲ್ಪಗಳೂ ಇಲ್ಲ.

ವಿಜ್ಞಾನಕ್ಕಿಂತ ಅಧಿಕವಾದುದು ಬಲ. ಬಲ ಅಂದರೆ ಸಾಮರ್ಥ್ಯ, ಪ್ರತಿಭಾವನ ಸಾಮರ್ಥ್ಯ. ಇದು ಮನಸ್ಸಿಗೆ ಸಿದ್ಧಿಸುತ್ತದೆ. ಒಬ್ಬ ಬಲಶಾಲಿಯು ನೂರಾರು ವಿಜ್ಞಾನಯುಕ್ತರನ್ನು ಅಲ್ಲಾಡಿಸಬಲ್ಲ. ಬಲಶಾಲಿಗೇ ಗುರುವಿನ ಉಪದೇಶ, ಗುರುವಿನ ಅನುಗ್ರಹ; ಬಲವುಳ್ಳವನು ಗುರುವಿನ ಅಂತರಂಗದ ಶಿಷ್ಯನಾಗುತ್ತಾನೆ. ಈ ಭೂಮಿ ನಿಲ್ಲಲು ಬಲ ಕಾರಣ. ಅಂತರಿಕ್ಷ ಸ್ವರ್ಗ ಪರ್ವತ ದೇವತೆಗಳೂ ಸಹ ಬಲದಿಂದ ನಿಂತಿದ್ದಾರೆ. ಬಲದ ಉಪಾಸನೆ ಮಾಡು.

ನಾರದ : ಬಲಕ್ಕಿಂತಲೂ ದೊಡ್ಡದು, ಮಿಗಿಲಾದುದು ಇಲ್ಲವೆ ?

ಸನತ್ಕುಮಾರ : ಇದೆ. ಅನ್ನ. ಹತ್ತು ರಾತ್ರಿ ಊಟಮಾಡಬೇಡ. ನೀನು ನೋಡಲಾರೆ; ನೀನು ಕೇಳಲಾರೆ; ನೀನು ಮನನ ಮಾಡಲಾರೆ; ನೀನು ಅರಿಯಲಾರೆ; ನೀನು ದುಡಿಯಲಾರೆ; ನೀನು ಫಲವನ್ನೂ ಅನುಭವಿಸಲಾರೆ. ಅನ್ನವನ್ನೇ ಉಪಾಸಿಸು.

ಆದರೆ ಅನ್ನವೇ ಮಿಗಿಲಾದುದಲ್ಲ. ನೀರು ಮಿಗಿಲಾದುದು. ಅದು ಹೀಗೆ: ಸುವೃಷ್ಟಿಯಿಂದ ನಲಿವು, ಸುವೃಷ್ಟಿಯಿಲ್ಲದಿದ್ದರೆ ನೋವು. ನೀರಿನಿಂದ ನೆಲ ಆಕಾಶ ಈ ಲೋಕ ಆ ಲೋಕ; ಹುಲ್ಲೊಂದೇ ಅಲ್ಲ, ಮರವೊಂದೇ

ಅಲ್ಲ, ನೀನೂ ಕೂಡ ನಾನೂ ಕೂಡ ನೀರಿನಿಂದ ಪ್ರತಿಷ್ಠಿತರು. ನನ್ನ ನಂಬುಗೆಯಲ್ಲಿ ಈ ಎಲ್ಲ ಮೂರ್ತರೂಪವೂ ನೀರೇ.

ಆದರೆ ನೀರಿಗಿಂತ ತೇಜಸ್ಸು ದೊಡ್ಡದು. ತೇಜಸ್ಸು ನೀರಿಗೆ ಕಾರಣ. ಇದರ ಉರಿಗೋಲು ವಾಯು. ಈ ಉರಿಗೋಲಿನಿಂದ ತೇಜಸ್ಸು ಆಕಾಶವನ್ನು ಉತ್ತೇಜಿಸುತ್ತದೆ. ಆಗ ಧಗಧಗ ಎನ್ನುವ ಆಕಾಶ ಮಳೆಗರೆಯುತ್ತದೆ. ತೇಜಸ್ಸಿನ ಉಪಾಸನೆ ಮಾಡು.

**ನಾರದ :** ತೇಜಸ್ಸಿಗಿಂತ ಮಿಗಿಲಾದುದೂ ಇದೆಯೆ ?

**ಸನತ್ಕುಮಾರ :** ಆಕಾಶ, ವಾತಾವರಣಕ್ಕೆ ವಾಯುವಿಗೆ ತೇಜಸ್ಸಿಗೆ ಕಾರಣ ಯಾವುದು ? ಆಕಾಶ, ಸೂರ್ಯ ಇರುವುದೆಲ್ಲಿ ? ಆಕಾಶದಲ್ಲಿ. ಚಂದ್ರ ? ಆಕಾಶದಲ್ಲಿ. ನಕ್ಷತ್ರ ಮಿಂಚು ಅಗ್ನಿಗಳು ಇರುವುದೆಲ್ಲಿ ? ಆಕಾಶದಲ್ಲಿ. ನನ್ನ ಈ ಮಾತು ನಿನ್ನನ್ನು ತಲುಪುವುದು ಹೇಗೆ ? ಆಕಾಶದಿಂದ. ನಾವೆಲ್ಲಿ ರಮಿಸುವುದು ? ಆಕಾಶದಲ್ಲಿ. ವಸ್ತು ಹುಟ್ಟುವುದೆಲ್ಲಿ ? ಬೆಳೆಯುವುದೆಲ್ಲಿ ? ಸಾಯುವುದೆಲ್ಲಿ ? ಆಕಾಶದಲ್ಲಿ. ಆಕಾಶದಲ್ಲಿ. ಆಕಾಶದಲ್ಲಿ. ಆಕಾಶವನ್ನೇ ಉಪಾಸಿಸು.

**ನಾರದ :** ಹಾಗಾದರೆ ಆಕಾಶವೇ ದೊಡ್ಡದು !

**ಸನತ್ಕುಮಾರ :** ನಿಜ. ಆದರೆ ಆಕಾಶವೇ ಭೌಮವಾದುದು ಮಹತ್ತಾದುದು ಎಂದೇನೂ ಅಲ್ಲ. ಅದಕ್ಕಿಂತ ದೊಡ್ಡದು ಸ್ಮೃತಿ. ಸ್ಮೃತಿಯೂ ಅಂತಃಕರಣದ ಧರ್ಮ. ಇದು ಒಂದು ವಿಧದಲ್ಲಿ ನೆನಪಿಸಿಕೊಳ್ಳುವ ಕ್ರಿಯಾಶೀಲತೆ. ಈ ಶಕ್ತಿ ಇಲ್ಲದವನಿಗೆ ಆಕಾಶವಿದ್ದರೇನು ? ಇಲ್ಲದಿದ್ದರೇ ? ಸ್ಮರಿಸಬಲ್ಲವನು ಕೇಳಬಲ್ಲ, ಅರಿಯಬಲ್ಲ, ಮನನ ಮಾಡಬಲ್ಲ. ಸ್ಮೃತಿಯಿರುವವನಿಗೆ ಪ್ರಪಂಚದ ಮೌಲ್ಯ ಹೆಚ್ಚುತ್ತದೆ.

ಸ್ಮೃತಿಗಿಂತ ಆಶೆ ದೊಡ್ಡದು. ಆಶೆ ಉದ್ದೀಪಕ. ಇಹಲೋಕದ ಬಗ್ಗೆ ಪರಲೋಕದ ಬಗ್ಗೆ ನಾವು ಉದ್ದೀಪಿತರಾಗಲು ಆಶೆಯೇ ಕಾರಣ.

ಆಶೆಗಿಂತಲೂ ಪ್ರಾಣ ಮಿಗಿಲಾದುದು. ಚಕ್ರದ ಹಲ್ಲುಗಳು ಅದರ ನಾಭಿಯೊಳಗೆ ಸೇರಿಕೊಳ್ಳುವ ಹಾಗೆ ಪ್ರಾಣದೊಳಗೆ ಎಲ್ಲವೂ ಸೇರಿಕೊಂಡಿರುತ್ತವೆ. ಚಕ್ರದ ನಾಭಿ ಹಾಗೂ ಚಕ್ರದ ಹಲ್ಲುಗಳು ಹೇಗೆ ಬೇರೆ ಬೇರೆ ಎನ್ನಿಸಿಕೊಳ್ಳಲಾರವೊ ಹಾಗೆಯೇ ಎಲ್ಲವೂ ಪ್ರಾಣ ಎನ್ನಿಸಿಕೊಳ್ಳುತ್ತವೆ. ಪ್ರಾಣ ತನ್ನ ಶಕ್ತಿಯಿಂದಲೇ ನಿರ್ಗಮಿಸುತ್ತದೆ, ಹಾಗೂ ತನ್ನ ಇಚ್ಛೆಯಿಂದಲೇ ನಿರ್ಗಮಿಸುತ್ತದೆ. ಯಾವ ಇಂದ್ರಿಯಕ್ಕೂ ಪ್ರಾಣಕ್ಕಿರುವ ಸಾಮರ್ಥ್ಯವಿಲ್ಲ. ಕ್ರಿಯೆ ಬೇರೆಯಲ್ಲ, ಅದನ್ನು ಕಾರ್ಯಗತಗೊಳಿಸುವುದೂ ಬೇರೆಯಲ್ಲ.

ಅದರ ಫಲವೂ ಬೇರೆಯಲ್ಲ. ಅವೆಲ್ಲವೂ ಪ್ರಾಣ. ಪ್ರಾಣಕ್ಕಿಂತ ಹೊರಗಿನದು ಏನೂ ಇಲ್ಲ, ಎಲ್ಲೂ ಇಲ್ಲ. ತಾನು ಆಗಮಿಸಲು ನಿಲ್ಲಲು ನಿರ್ಗಮಿಸಲು ಅದಕ್ಕೆ ತಾನೇ ಕಾರಣ. ಅದೇ ತಾಯಿ, ತಂದೆ, ಸಂಬಂಧ, ಬ್ರಾಹ್ಮಣ, ಆಚಾರ್ಯ ಎಲ್ಲ.

ಈಗೊಂದು ಉದಾಹರಣೆ: ಒಬ್ಬನು ತಂದೆಯನ್ನೋ ಆಚಾರ್ಯನನ್ನೋ ನಿಂದಿಸುತ್ತಾನೆ. ''ನಿನಗೆ ಧಿಕ್ಕಾರ, ನೀನು ಪಿತೃದ್ರೋಹಿ, ನೀನು ಗುರುದ್ರೋಹಿ'' ಎಂದು ಜನ ಅವನನ್ನು ನಿಂದಿಸುತ್ತಾರೆ. ಆದರೆ ಅವನ ತಂದೆಯ ಅಥವಾ ಆಚಾರ್ಯನ ಪ್ರಾಣ ಹೋಗಿದೆ ಎಂದಿಟ್ಟುಕೊ. ಅವನು ತಂದೆಯನ್ನು ಅಥವಾ ಆಚಾರ್ಯನನ್ನು ದಹಿಸುತ್ತಾನೆ. ಅವನನ್ನು ಯಾರೂ ಪಿತೃಹಂತಕ ಅಥವಾ ಗುರುಹಂತಕ ಎಂದು ದೂಷಿಸುವುದಿಲ್ಲ. ಇದರ ಅರ್ಥ, ತಂದೆಯೆನ್ನು ಆಚಾರ್ಯರೆನ್ನು ಈ ಎಲ್ಲ ಸಂಬಂಧಗಳೂ ಪ್ರಾಣವೇ. ಪ್ರಾಣವಿಲ್ಲದಾಗ ಯಾವ ಸಂಬಂಧ ಇರಬಲ್ಲುದು ನೀನೇ ಹೇಳು? ಹೀಗಿರುವಾಗ, ಪ್ರಾಣವು ನಾನು ಹೇಳಿದ ಎಲ್ಲ ತತ್ತ್ವಗಳನ್ನು ಅತಿಕ್ರಮಿಸಿರುತ್ತದೆ, ಮೀರಿರುತ್ತದೆ ಹಾಗೂ ಎಲ್ಲವನ್ನೂ ಒಳಗೊಂಡಿರುತ್ತದೆ. ಪ್ರಾಣವನ್ನು ಅರಿತವನು ಅತಿವಾದಿ. ಪ್ರಪಂಚಕ್ಕೆಲ್ಲ ಆತ್ಮವಾಗಿರುವ ಪ್ರಾಣವೇ ನಾನು ಎಂದು ಅರಿತವನು ಮತ್ತು ಶ್ರದ್ಧೆಯಿಟ್ಟವನು ಅತಿವಾದಿ.

ಈಗ ನಾರದನಿಗೆ ನೆಮ್ಮದಿಯೆನಿಸಿತು. ಪ್ರಾಣವೇ ಮಹತ್ತಾದುದು; ಮಹತ್ತಾದುದನ್ನು ತಾನು ಅರಿತೆ ಎಂದು ಅವನಿಗೆ ನೆಮ್ಮದಿಯಾಯಿತು. ನಾರದನು ಹೀಗೆಯೇ ತಿಳಿಯುತ್ತಾನೆ ಎಂದು ಸನತ್ಕುಮಾರನು ಊಹಿಸಿದ್ದನು. ಅವನು ಕುತೂಹಲದ ಉದ್ದೀಪನಕ್ಕೆ ತಾನು ಹೇಳಿದ ಮಾತಿದು. ಇಷ್ಟೇ ಅವನನ್ನು ತೃಪ್ತನನ್ನಾಗಿಸಿತು ಎಂದು ಅರಿತನು. ಪ್ರಾಣವನ್ನು ತಿಳಿದವನು ನಿಜವಾದ ಅತಿವಾದಿಯಲ್ಲ. ಅತಿವಾದಿಯೆಂದರೆ ಭೌಮವಾದ ಸತ್ಯವನ್ನು ಆ ಪರಮಾರ್ಥವನ್ನು ಅರಿತು ನಂಬಿದವನು. ನಾರದನನ್ನು ಪ್ರತಿ ತತ್ತ್ವಜ್ಞಾನದ ಕೊನೆಯಲ್ಲಿ ಹೆಚ್ಚು ಹೆಚ್ಚು ಸ್ವಸ್ಥವಾಗಿಡುತ್ತ ಹೆಚ್ಚು ಕುತೂಹಲಿಯನ್ನಾಗಿ ಮಾಡುವುದು ಸನತ್ಕುಮಾರನ ಇಂಗಿತ. ಒಂದು ತತ್ತ್ವವನ್ನು ಅದೇ ಮಹತ್ತಾದುದು ಎಂದು ನಾರದ ನಂಬಿ ಕುಳಿತಿರುವಾಗ ಅದಕ್ಕಿಂತ ಮಹತ್ತಾದುದನ್ನು ತಿಳಿಸಿ ಚಕಿತಗೊಳಿಸಿ ಅವನು ಅಭಿಮುಖನಾದಾಗ ಸಂತ ಸನತ್ಕುಮಾರನು ಮತ್ತೊಂದು ಮಿಗಿಲಾದ ತತ್ತ್ವದ ಉಪದೇಶ ಮಾಡುತ್ತಾನೆ.

ಸನತ್ಕುಮಾರ: ಆದರೆ ಪ್ರಾಣದ ಅರಿವೇ ಪೂರ್ಣವಾದ ಮತ್ತು ನಿಜವಾದ ಅರಿವಲ್ಲ. ಸತ್ಯದ ಅರಿವು ಪೂರ್ಣ ವಿಜ್ಞಾನ. ಸತ್ಯವನ್ನು ತಿಳಿದವನೇ

ನಿಜವಾದ ಅತಿವಾದಿ. ಸತ್ಯವನ್ನು ತಿಳಿದು ನಂಬಿದವನೇ ನಿಜವಾದ ಅತಿವಾದಿ. ಸತ್ಯವನ್ನು ತಿಳಿದು ನಂಬಿ ಹೇಳುವವನೇ ನಿಜವಾದ ಅತಿವಾದಿ.

**ನಾರದ:** ಭಗವನ್, ನಾನು ಸತ್ಯವನ್ನು ಅರಿಯಬೇಕು. ನನಗೆ ಸತ್ಯದ ಉಪದೇಶ ಮಾಡಿ.

**ಸನತ್ಕುಮಾರ:** ನಾನೀಗ ಹೇಳಲಿರುವ 'ಸತ್ಯ'ದ ಅರಿವಿಗೆ ವಿಜ್ಞಾನ ಅಗತ್ಯ. ವಿಜ್ಞಾನ ಸಿದ್ಧಿಸುವುದು ಮನನದಿಂದ. ಆದರೆ 'ಅಸ್ತಿ – ಇದೆ' ಎಂಬ ನಂಬುಗೆಯಿಂದ ಪುಟಗೊಂಡ ಶ್ರದ್ಧೆ ಯಾರಿಗೆ ಇಲ್ಲವೋ ಅವನಿಂದ ಮನನ ಮಾಡಲು ಸಾಧ್ಯವಿಲ್ಲ. ನಿಷ್ಠೆಯಿಂದ ಗುರು ಶುಶ್ರೂಷೆ ಮಾಡಿದರೆ ಶ್ರದ್ಧೆ ಸಿಗುತ್ತದೆ. ನಿಷ್ಠೆಗೆ ಇಂದ್ರಿಯ ಸಂಯಮ ಮತ್ತು ಚಿತ್ತದ ಏಕಾಗ್ರತೆ ಕಾರಣ. ಇಂದ್ರಿಯ ಸಂಯಮ ಯಾವಾಗ ಸಿದ್ಧಿಸುತ್ತದೆ? ಚಿತ್ತದ ಏಕಾಗ್ರತೆ ಹೇಗೆ? ಇದು ಸಣ್ಣ ವಿಷಯವಲ್ಲ. ಯಾವ ಮನುಷ್ಯನಿಗೆ ಇಂದ್ರಿಯ ಸಂಯಮವೇ ಒಂದು ಅಸಾಧಾರಣ ಸುಖ ಎನಿಸಲಾರದೋ ಹಾಗೂ ಚಿತ್ತದ ಏಕಾಗ್ರತೆ ಯಲ್ಲಿ ಸುಖ ದೊರೆಯಲಾರದೋ ಅವನು ಮನನವನ್ನು ಸಾಧಿಸಲಾರನು. ಹೀಗಾಗಿ ಸುಖದ ಮರ್ಮವನ್ನು ತಿಳಿದು ಅದನ್ನು ಪಡೆಯಬೇಕು.

ಯಾವುದು ಮಹತ್ತಾದುದೋ ಅದೇ ಸುಖ. ಮಹತ್ತಾದುದೇ ಭೂಮ. ಭೂಮವೇ ಭೌಮ. ಭೂಮವೇ ಸತ್ಯ. ಸತ್ಯವೇ ಸುಖ. ನಿನಗೆ ನೆನಪಿರಲಿ, **"ಯೋ ವೈ ಭೂಮಾ ತತ್ಸುಖಮ್"** *(ಛಾಂದೋಗ್ಯ 7-23)*. ಈ ಭೂಮಕ್ಕಿಂತ ಕಡಿಮೆಯಾಗಿರುವುದೆಲ್ಲ, ಕೆಳಗಿರುವುದೆಲ್ಲ ಅಲ್ಪ. ಅಲ್ಪವಾದುದರ ಸ್ವಭಾವ ಅಧಿಕವಾದುದರ ಬಗ್ಗೆ ತೃಷ್ಣೆಯನ್ನು ಹೆಚ್ಚಿಸುವುದು. ಎಲ್ಲಿ ತೃಷ್ಣೆ ತೋರುತ್ತದೆಯೋ ಅದು ಸುಖವಲ್ಲ. ಅಲ್ಲಿ ಸುಖವಿಲ್ಲ. ಆದುದರಿಂದ ಭೂಮವನ್ನೇ ತಿಳಿಯಬೇಕು.

ಭೂಮವನ್ನು ಹೀಗೆ ತೋರಿಸಲು ಯತ್ನಿಸುತ್ತೇನೆ: ಭೂಮದಲ್ಲಿ ನಿಂತವನು ಬೇರೊಂದನ್ನು ಕಾಣಲಾರ, ಬೇರೊಂದನ್ನು ಕೇಳಲಾರ, ಸ್ಪರ್ಶಿಸಲಾರ, ಅನುಭವಿಸಲಾರ, ಅರಿಯಲಾರ. ಅಲ್ಲಿ ಮತ್ತೊಂದಿಲ್ಲ. ಏಕೆಂದರೆ ಅಲ್ಲಿ ಜ್ಞಾತವೂ ಅವನೇ ಜ್ಞೇಯವೂ ಅವನೇ. ಅಲ್ಲಿ ಮಾತಿನ ವ್ಯವಹಾರವಿಲ್ಲ. ರೂಪವಿಲ್ಲ. ನಾವು ಎಲ್ಲಿ ಬೇರೊಂದನ್ನು ಕಾಣುವೆವೋ ಕೇಳುವೆವೋ ಸ್ಪರ್ಶಿಸುವೆವೋ ಅನುಭವಿಸುವೆವೋ ಅದು ಭೌಮವಲ್ಲ. ಹೀಗೆ ಅನನ್ಯವಾದುದೇ ಭೂಮವಾದುದು; ಅದುವೇ ಅಮೃತ. ಅಲ್ಪವಾದುದು ನಾಶಶೀಲ.

**ನಾರದ:** ಭಗವನ್, ಮಹತ್ತಾದ ಈ ಭೂಮಕ್ಕೆ ಆಶ್ರಯ ಯಾವುದು?

ಸನತ್ಕುಮಾರ: ಅದಕ್ಕೆ ತನ್ನ ಮಹಿಮೆಯೇ ಆಶ್ರಯ. ಅಥವಾ ಮಹಿಮೆಯೂ ಸಹ ಅದಕ್ಕೆ ಆಶ್ರಯವಲ್ಲ. ಭೌಮವು ತನ್ನ ಮಹಿಮೆಯಲ್ಲೂ ಪ್ರತಿಷ್ಠಿತವಾಗಿಲ್ಲ. ಲೋಕವ್ಯವಹಾರ ಹೇಗಿದೆ ನೋಡು! ಗೋಧನ ದೊಡ್ಡದು ಎನ್ನುತ್ತಾರೆ; ಆನೆ ಕುದುರೆ ಸೇವಕರನ್ನೂ ಚಿನ್ನ ನೆಲಗಳನ್ನೂ ದೊಡ್ಡದೆಂದು ಕರೆಯುತ್ತಾರೆ. ಈ ಯಾವುದು ದೊಡ್ಡದಲ್ಲ ಮತ್ತು ಮಹಿಮೆಯಲ್ಲ. ಎಲ್ಲ ಅಲ್ಪ; ನಶ್ವರ. ಇಲ್ಲಿ ಒಂದು ಮತ್ತೊಂದನ್ನು ಆಶ್ರಯಿಸುವುದೇ ಅಲ್ಪತೆಗೆ ಕಾರಣ. ಈಗ ನೀನೇ ಕೇಂದ್ರ. ಉದಾಹರಣೆಗೆ ಹೇಳುತ್ತೇನೆ: ಭೂಮವು ನಿನ್ನ ಕೆಳಗೆ ಮೇಲೆ ಹಿಂದೆ ಮುಂದೆ ಎಲ್ಲ ಕಡೆಗೂ ಇದೆ. ಅದು ಅದೆಲ್ಲವೂ ಆಗಿದೆ. ಅಥವಾ ಇದು ಇದೆಲ್ಲವೂ ಆಗಿದೆ. 'ನಾನು' ಎನ್ನುತ್ತ ನಾವು ವ್ಯವಹರಿಸುತ್ತೇವೆ. ಇದು ಬರಿಯ 'ಅಹಂ' ಪ್ರತ್ಯಯದ ವ್ಯವಹಾರ. ಈಗ ನಾನೇ ಕೆಳಗಿರುವವನು. ನಾನೇ ಮೇಲಿರುವವನು. ನಾನು ಇದೆಲ್ಲವೂ ಆಗಿರುವವನು ಎನ್ನುವುದೇ ತಾತ್ಪರ್ಯ. ಮೂರ್ಖರ ವರ್ತನೆಯಲ್ಲಿ ಮಾತ್ರ 'ಅಹಂ' ಅಂದರೆ 'ತಾನು', ಈ ದೇಹೇಂದ್ರಿಯಗಳಿಂದ ಪರಿಪುಷ್ಟವಾದ 'ತಾನು'. ಈಗ ಇನ್ನೂ ಸ್ಪಷ್ಟಪಡಿಸುತ್ತೇನೆ. ನಾನು ಆತ್ಮ. ಆತ್ಮನೇ ಕೆಳಗಿರುವವನು. ಆತ್ಮನೇ ಮೇಲಿರುವವನು. ಎಲ್ಲವೂ ಆತ್ಮ ಎನ್ನುವುದು ತತ್ತ್ವ. ಇದನ್ನು ಕಾಣಬಲ್ಲವನು ಮನನ ಮಾಡುತ್ತಾನೆ. ಮನನ ಮಾಡಬಲ್ಲವನು ಅರಿಯುತ್ತಾನೆ. ಅರಿಯಬಲ್ಲವನೇ ಆತ್ಮರತ, ಅವನೇ ಆತ್ಮಕ್ರೀಡ, ಅವನೇ ಆತ್ಮದ ಜೊತೆಗೆ ಇರುವವನು, ಅವನಿಗೆ ಆತ್ಮದ ಜೊತೆಗೆ ಆನಂದ. ಹೀಗೆ ಅವನು ತನ್ನ ಸಾಮ್ರಾಜ್ಯದಲ್ಲಿರುವ 'ಸ್ವರಾಟ್!

ಹೀಗೆ ಬಹುಶ್ರುತನಾಗಿದ್ದರೂ ರಾಗಾದಿದ್ವೇಷಗಳಿಂದ ತಲ್ಲಣಗೊಳ್ಳುತ್ತಿದ್ದ ನಾರದನ ಮನಸ್ಸು ತೆರೆಯಿತು. ಸಂತ ಸನತ್ಕುಮಾರನಿಂದ ಅವನು ಕತ್ತಲೆಯ ಕಡಲನ್ನು ದಾಟಿದನು. *(ಛಾಂದೋಗ್ಯ ಅಧ್ಯಾಯ 7, ಖಂಡಗಳು 1-26)*

ನಾರದನ ಚಿತ್ತ ಪ್ರಸನ್ನವಾಯಿತು. ಅವನು ತನ್ನನ್ನು ಅರಿಯ ತೊಡಗಿದನು. ಅವನ ಸಂಕಲ್ಪ ಪ್ರಬಲವಾಗತೊಡಗಿತು. ನಾನು ಪ್ರಜಾಪತಿ. ನಾನು ಬ್ರಾಹ್ಮಣನಷ್ಟೇ ಅಲ್ಲ, ಬ್ರಾಹ್ಮಣನ ಯಶಸ್ಸೂ ನಾನೇ. ನಾನು ಕ್ಷತ್ರಿಯನಷ್ಟೇ ಅಲ್ಲ, ಕ್ಷತ್ರಿಯನ ಯಶಸ್ಸೂ ನಾನೇ. ನಾನು ವೈಶ್ಯನಷ್ಟೇ ಅಲ್ಲ, ವೈಶ್ಯನ ಯಶಸ್ಸೂ ನಾನೇ. ನಾನು ಯಶಸ್ಸುಗಳ ಯಶಸ್ಸು. ನಾನೇ ಯಶಸ್ಸು. ನನಗೆ ಸಭೆಯಿದೆ ಅರಮನೆಯಿದೆ. ಇಂತಹ ನನಗೆ ಲೋಹಿತವೂ ದಂತರಹಿತವೂ ಆದ ದಂತರಹಿತವೂ ಲೋಹಿತವೂ ಆದ ಯೋನಿಯ ಸಂಬಂಧ ಬೇಡ. ಹುಟ್ಟೂ ಬೇಡ, ಸಾವೂ ಬೇಡ. ನಂತರ ನಾರದನಿಗೆ ತನ್ನ

ಶರೀರವೇ ಸರ್ವಸ್ವವಾಗಿ ತೋರಿತು. ಏಕೆಂದರೆ ಅದರೊಳಗೆ ಎಲ್ಲವೂ ಅಂತರ್ಗತವಾಗುತ್ತಿರುವುದು ಕಾಣಿಸಿತು. ಇದು ಶರೀರವಲ್ಲ. ಇದು ಬ್ರಹ್ಮಪುರ. ಪರಮಾತ್ಮನು ಇದರಲ್ಲಿ ನೆಲೆಸಿದ್ದಾನೆ. ಈ ಶರೀರದೊಳಗೊಂದು ಆಕಾಶವಿದೆ. ಅದೇ ಹೃದಯಪದ್ಮ. ಅದನ್ನು ಅರಿತರಾಯಿತು.

ಹೃದಯಪದ್ಮವೆಂಬ ಅಂತರಾಕಾಶ ಚಿಕ್ಕದೂ ಅಲ್ಲ. ಇದು ಆಕಾಶದಷ್ಟೇ ವಿಶಾಲವಾದುದು. ಆ ಆಕಾಶವೇ ಈ ಆಕಾಶ. ಇಲ್ಲಿ ಸ್ವರ್ಗವಿದೆ. ಇಲ್ಲಿ ಭೂಮಿಯಿದೆ. ಆಕಾಶದಲ್ಲಿ ಕಾಣುವ ಪ್ರತಿಯೊಂದೂ ಈ ಆಕಾಶದಲ್ಲಿ ಅಂತರ್ಗತವಾಗಿದೆ. ಸೂರ್ಯ ಚಂದ್ರ ಮಿಂಚು ನಕ್ಷತ್ರಗಳು ವಾಯು ಅಗ್ನಿಗಳು ಈ ಅಂತರಾಕಾಶದಲ್ಲಿವೆ. ಇಲ್ಲಿ ಎಲ್ಲವೂ ನವೆಯುತ್ತವೆ. ಪುಣ್ಯದಿಂದ ಸಂಪಾದಿಸಿದ ಭೋಗವೂ ನವೆದುಹೋಗುತ್ತದೆ. *(ಛಾಂದೋಗ್ಯ ಅಧ್ಯಾಯ 8 ಖಂಡ 1.)* ರಥಕ್ಕೆ ಕುದುರೆಯಂತೆ ಈ ಶರೀರಕ್ಕೆ ಆತ್ಮನು ಕಟ್ಟಲ್ಪಟ್ಟಿದ್ದಾನೆ. ಆತ್ಮನೇ ಪ್ರಾಣ. ಇಂದ್ರಿಯ ಮನೋಬುದ್ಧಿಗಳಿಂದ ಕೂಡಿದ ಪ್ರಜ್ಞಾಸ್ವರೂಪನಾದ ಪ್ರಾಣ ಇವನು. ಈ ದೇಹದೊಳಗೆ ಆತ್ಮ ಕೂಡ ಸ್ವತಂತ್ರನಲ್ಲ. ಈ ದೇಹದ ಬಂಧನ ಆತ್ಮನಿಗೆ ತಪ್ಪಿದ್ದಲ್ಲ. ಆತ್ಮನಿಗೆ ಸ್ವಚ್ಛಂದ ವರ್ತನೆಯಿಲ್ಲ. ಅವನಿಗೆ ಎಲ್ಲ ಇಂದ್ರಿಯಗಳೂ ಕಣ್ಣು.

* * *

– ಮೂರು –

## ಪ್ರಾಚೀನ ಶಾಲ, ಅವನ ಗೆಳೆಯರು ಹಾಗೂ ಆರುಣಿ

ಋಷಿ ಉಪಮನ್ಯುವಿನ ಮಗ ಪ್ರಾಚೀನ ಶಾಲ. ಪ್ರಾಚೀನ ಶಾಲ ಮಹಾಶ್ರೋತ್ರಿಯ, ನಿಯಮಸ್ಥನಾದ ಗೃಹಸ್ಥ. ಅವನಿಗೆ ತನ್ನ ಆತ್ಮದ ಹಾಗೂ ಆ ಪರಮಾತ್ಮದ ನಡುವಿನ ಸಂಬಂಧವೆಂತಹುದು ಎನ್ನುವ ಕುತೂಹಲ ತಲೆದೋರಿತು. ಕುತೂಹಲ ಜಿಜ್ಞಾಸೆಯಾಗಿ, ಜಿಜ್ಞಾಸೆ ಬಲವಾಯಿತು. ಈ ಆತ್ಮ ಯಾರು? ಆ ಪರಮಾತ್ಮ ಯಾರು ಹಾಗಾದರೆ? ಈ ಗೊಂದಲ ಬಗೆಹರಿಯಲಿಲ್ಲ. ಕೊನೆಗೆ ಅವನು ತನ್ನ ಗೆಳೆಯರಾದ ಪುರುಷನ ಮಗ ಸತ್ಯಯಜ್ಞ, ಭಲ್ಲವಿಯ ಮಗ ಇಂದ್ರದ್ಯುಮ್ನ, ಜನ, ಬುಡಿಲ ಎನ್ನುವವರನ್ನು ಕಂಡನು. ಅವರೂ ಗೃಹಸ್ಥರು, ಶ್ರದ್ಧಾಳುಗಳು, ಪ್ರಾಚೀನಶಾಲನಂತೆಯೇ ಮಹಾಶ್ರೋತ್ರಿಯರು. ಉತ್ತರ ಅವರಿಗೂ ಹೊಳೆಯಲಿಲ್ಲ. ತಾವು ಓದಿದ

ತರ್ಕಾದಿ ವಿದ್ಯೆಗಳು ಅವರಿಗೆ ಸಾಲದು ಎನ್ನಿಸಿತು. ಅಶಾಂತಿ ಇಮ್ಮಡಿಯಾಗಿ ಎಲ್ಲರೂ ಸೇರಿ ಒಬ್ಬ ಆಚಾರ್ಯನ ಬಳಿಗೆ ಹೋದರು. ಅವನು ಈ ಸಂದೇಹವನ್ನು ಅರ್ಥ ಮಾಡಿಕೊಂಡು ನಂತರ ಯೋಚಿಸಿ ಹೀಗೆ ಹೇಳಿದನು :

''ನೀವು ಕೇಳುತ್ತಿರುವುದು ವೈಶ್ವಾನರಾತ್ಮನ ಕುರಿತು. ವೈಶ್ವಾನರಾತ್ಮನ ಅರಿವಾದರೆ ಆತ್ಮ ಯಾರು ಪರಮಾತ್ಮ ಯಾರು ಎನ್ನುವ ಅರಿವು ಉಂಟಾಗುತ್ತದೆ. ಉದ್ದಾಲಕ ಆರುಣಿಯು ಜಟಿಲವಾದ ಈ ಸಮಸ್ಯೆಗೆ ಉತ್ತರವನ್ನು ಕಂಡುಹಿಡಿಯಬಲ್ಲನು. ನೀವೀಗ ಅವನನ್ನು ಕಾಣಬೇಕು.''

ಪ್ರಾಚೀನಶಾಲನು ಗೆಳೆಯರನ್ನು ಕಟ್ಟಿಕೊಂಡ ಉದ್ದಾಲಕ ಆರುಣಿಯನ್ನು ಅರಸಿಕೊಂಡು ಹೋದನು. ಇವರು ನೈಷ್ಠಿಕರು ಮತ್ತು ಮಹಾಶ್ರೋತ್ರಿಯರೆಂದು ಉದ್ದಾಲಕ ಆರುಣಿಗೆ ತಿಳಿದಿತ್ತು. ವೈಶ್ವಾನರಾತ್ಮನ ಕುರಿತು ತನಗೇನೋ ಅಷ್ಟಿಷ್ಟು ತಿಳಿದಿದೆ. ಆದರೆ ಇವರಿಗೆ ಮನವರಿಕೆ ಮಾಡಿಕೊಡುವಷ್ಟು ಪ್ರಾಜ್ಞ ತಾನಲ್ಲ. ಇವರನ್ನು ಅಶ್ವಪತಿ ಕೇಕಯ ರಾಜನ ಬಳಿಗೆ ಕಳುಹಿಸಿಬಿಡುತ್ತೇನೆ ಎಂದುಕೊಂಡನು. ಹಾಗೂ ಅವರಿಗೆ ಹಾಗೆಯೇ ತಿಳಿಸಿದನು. ಪ್ರಾಚೀನಶಾಲ ಮತ್ತು ಅವನ ಗೆಳೆಯರು ಅಶ್ವಪತಿಯನ್ನು ಹುಡುಕಿಕೊಂಡು ಹೊರಟರು.

ಅಶ್ವಪತಿ ಕೇಕಯನು ದೊರೆ. ಅತಿಥಿಗಳನ್ನು ಕಂಡು ಸಡಗರವಟ್ಟು ಅವನು ಸತ್ಕರಿಸಿದನು. ದೊರೆ ಅಶ್ವಪತಿಯು ಆ ಸಮಯದಲ್ಲಿ ಒಂದು ಯಜ್ಞಕ್ಕಾಗಿ ಸಿದ್ಧತೆಯಲ್ಲಿ ತೊಡಗಿದ್ದನು. ಯಜ್ಞಕ್ಕೆ ಇವರನ್ನೇ ಋತ್ವಿಕ್ಕುಗಳನ್ನಾಗಿ ಒಪ್ಪಿಸಬೇಕು. ಆದರೆ ಮಹಾಮಹಿಮರಾದ ಇವರು ವೇದಾಧ್ಯಯನ ಸಂಪನ್ನರಾದ ನೈಷ್ಠಿಕರಾಗಿದ್ದು ಇದಕ್ಕೆ ಒಪ್ಪುವರೇ ಎಂದು ಚಿಂತಿಸಿದನು. ತನ್ನ ಈ ಜನಪದದ ಹಾಗೂ ತನ್ನ ಪರಿಚಯ ಇವರಿಗಿಲ್ಲ. ಇದೇ ಕಾರಣಕ್ಕಾಗಿ ಯಜ್ಞದಲ್ಲಿ ಋತ್ವಿಕ್ಕುಗಳಾಗಲು ಒಪ್ಪದಿದ್ದರೆ? ಈ ಯೋಚನೆಯೊಳಗೆ ಅಶ್ವಪತಿ ಕೇಕಯ ದೊರೆಯು ನಮ್ರತಾಪೂರ್ವಕವಾಗಿ ಅವರಿಗೆ ಹೀಗೆ ಬಿನ್ನವಿಸಿಕೊಂಡನು –

''ಈ ನನ್ನ ಜನಪದದಲ್ಲಿ ಕಳ್ಳತನವಿಲ್ಲ, ಜಿಪುಣರಿಲ್ಲ, ಕುಡಿತವಿಲ್ಲ, ಅಗ್ನಿಯ ಉಪಾಸನೆ ಮಾಡದವನಿಲ್ಲ, ಇಲ್ಲಿ ವ್ಯಭಿಚಾರವಿಲ್ಲ, ಮಾನ್ಯರಾದ ತಾವೆಲ್ಲರೂ ನಾನು ಉದ್ದೇಶಿಸಿದ ಯಜ್ಞದಲ್ಲಿ ಋತ್ವಿಕ್ಕುಗಳಾಗಲು ಒಪ್ಪಿಕೊಳ್ಳಬೇಕು. ನಾನು ಸಹಜವಾಗಿ ಒಬ್ಬೊಬ್ಬ ಋತ್ವಿಕ್ಕಿಗೆ ಇಲ್ಲಿ ಎಷ್ಟು ಧನ ನೀಡುವೆನೋ ಆ ಎಲ್ಲ ಸೇರಿದಷ್ಟನ್ನು ತಮ್ಮಲ್ಲಿ ಪ್ರತಿಯೊಬ್ಬನಿಗೂ ನೀಡುವೆನು. ದಯವಿಟ್ಟು ಸಮ್ಮತಿಸಿ.''

ಅಶ್ವಪತಿ ರಾಜನ ವಿನಂತಿಯನ್ನು ಪ್ರಾಚೀನಶಾಲ ಹಾಗೂ ಅವನ ಗೆಳೆಯರು ಸಮ್ಮತಿಸಲಿಲ್ಲ. ಏಕೆಂದರೆ ಒಪ್ಪಿಕೊಳ್ಳುವುದು ನೀತಿಗೆ ವಿರುದ್ಧ ವಾಗಿತ್ತು. ಅದನ್ನು ರಾಜನಿಗೆ ಅವರು ಹೀಗೆ ತಿಳಿಸಿದರು :

''ನಾವೆಲ್ಲ ಸೇರಿ ಒಂದು ಉದ್ದೇಶವಿರಿಸಿಕೊಂಡು ನಿನ್ನ ಬಳಿಗೆ ಬಂದಿದ್ದೇವೆ. ಹೀಗೆ ಬಂದಿರುವಾಗ ನಮ್ಮ ಗಮನ ಅಚಲವಾಗಿರಬೇಕು. ಅದು ನೀತಿ ಕೂಡ ಹೌದು. ನಾವು ಬೇರೆ ಯಾವುದರಲ್ಲೂ ಪಾಲುಗೊಳ್ಳುವಂತಿಲ್ಲ. ಇದು ನಿನಗೂ ತಿಳಿದಿರುವ ಸಂಗತಿ. ಆತ್ಮನ ಮತ್ತು ಪರಮಾತ್ಮನ ಸಂಬಂಧವನ್ನು ಅರಿತವನು ಎನ್ನುವ ಕೀರ್ತಿ ನಿನಗಿದೆ. ಆ ವೈಶ್ವಾನರಾತ್ಮನನ್ನು ನಮಗೆ ನೀನು ತಿಳಿಸಬೇಕು ಅರಿವಿನ ಉಪದೇಶ ನೀಡಬೇಕು ಎನ್ನುವುದೇ ನಮ್ಮಗಳ ಅರಿಕೆ.''

ಇದಕ್ಕೆ ಅಶ್ವಪತಿರಾಜನು ಒಪ್ಪಿಕೊಳ್ಳಲೇ ಬೇಕಾಯಿತು. ಆದರೆ ಉಪದೇಶಕ್ಕೆ ಆ ಸಮಯ ಸೂಕ್ತವಾಗಿರಲಿಲ್ಲ. ಅದರ ಚಿಂತನೆ ನಡೆಯ ಬೇಕಾದುದು ಪ್ರಾತಃಕಾಲದಲ್ಲಿ. ಆದ್ದರಿಂದ 'ನಾಳೆ ಉಪದೇಶಿಸುತ್ತೇನೆ' ಎಂದನು.

ಇದರಿಂದ ಗೆಳೆಯರಿಗೆ ನೆಮ್ಮದಿಯಾಯಿತು ದೊರೆ ಅಶ್ವಪತಿಯ ವಿನಯವನ್ನು ಅವರು ಪರಿಗಣಿಸಿದರು. ''ಪ್ರಾತಃಕಾಲದಲ್ಲಿ'' ಎಂದು ಅಶ್ವಪತಿಯು ಹೇಳಿರದಿದ್ದರೂ ಕೂಡ ಶಿಷ್ಟಾಚಾರವನ್ನು ಬಲ್ಲ ಅವರು ಮಾರನೆಯ ಮುಂಜಾನೆ ಸಮಿತ್ತುಗಳನ್ನು ಹಿಡಿದುಕೊಂಡು ಶಿಷ್ಯರು ಆಚಾರ್ಯನ ಬಳಿಗೆ ಬರುವಂತೆ ರಾಜನ ಬಳಿಗೆ ಬಂದರು.

ಅಶ್ವಪತಿರಾಜನು ಅವರಿಗೆ ಹೀಗೆ ಉಪದೇಶ ಮಾಡಿದನು : ಆತ್ಮ ಹಾಗೂ ಪರಮಾತ್ಮನ ನಡುವಿನ ಸಂಬಂಧ ಗಾಢವಾದ ಆಧ್ಯಾತ್ಮಿಕ ಅನುಭವದಿಂದ ಮಾತ್ರ ತೋರುತ್ತದೆ. ಅನುಭಾವಿಗೆ ಭೇದ ಕಾಣಿಸುವುದಿಲ್ಲ. ಅವನಿಗೆ ಅಭೇದವು ಗೋಚರಿಸುತ್ತದೆ. ಅದೇ ವೈಶ್ವಾನರ. ವಿಶ್ವವೇ ವೈಶ್ವಾನರನ ದೇಹ. ವಿಶ್ವವೇ ವೈಶ್ವಾನರ. ಸ್ವರ್ಗ ಅವನ ತಲೆ, ಸೂರ್ಯ ಕಣ್ಣು, ವಾಯು ಪ್ರಾಣ, ಆಕಾಶ ಅವನಿಗೆ ನಡುಮೈ, ನೀರು ಅವನ ಮೂತ್ರಾಶಯ, ಈ ಭೂಮಿ ಆತನ ಪಾದ. ಇಂತಹ ಅನುಭಾವದ ಸ್ಥಿತಿಯಲ್ಲಿ ನಾವು ಮಾಡುವ ಯಾಜ್ಞಿಕ ಕ್ರಿಯೆ ಜರುಗಬೇಕು. ಇದಕ್ಕೆ ತಪ್ಪಿ ನಡೆಯುವ ಮೋಹ ಕೆಂಡಗಳನ್ನು ಕೆದರಿ ತೆಗೆದು ಬರಿ ಬೂದಿಯಲ್ಲಿ ಆಹುತಿ ನೀಡಿ ಉಪಾಸನೆ ಮಾಡಿದಂತೆ.

ಈ ಉಪದೇಶದಿಂದ ಪ್ರಾಚೀನಶಾಲ ಮತ್ತು ಅವನ ಗೆಳೆಯರ ಸಂದೇಹ ದೂರವಾಯಿತು. ಭೇದಜ್ಞಾನವು ಅನುಭವದಿಂದ ಬಂದುದಲ್ಲ.

ಚರ್ಚೆ-ಗೋಷ್ಠಿಗಳಿಂದ ಬಂದುದು. ಏಕತ್ವದ ಬುದ್ಧಿ ಮಾತ್ರ ನಿಜವಾದ ಏಕತ್ವದ ಪರಿಪಾಕ. ಹೀಗೆ ಆತ್ಮ ಯಾರು ಪರಮಾತ್ಮ ಯಾರು ಎನ್ನುವ ಸಂದೇಹ ಹಾಗೂ ಚರ್ಚೆಗಳನ್ನು ತೊರೆದು ಅವರು ತಮ್ಮ ಊರಿಗೆ ಮರಳಿದರು.

*　　　*　　　*

## – ನಾಲ್ಕು –

## ರಾಜಾ ಜಾನಶ್ರುತಿಯ ಉಪಾಖ್ಯಾನ

ರಾಜನಾದ ಜಾನಶ್ರುತಿಯು ಶ್ರದ್ಧಾಪೂರ್ವಕವಾಗಿ ದಾನಮಾಡುವವನು ಹಾಗೂ ಬಹುದಾನಿ. ಜನರು ಎಲ್ಲಕಡೆ ಸುಖಿಗಳಾಗಿರಬೇಕು ಯಾರೂ ಹಸಿದುಕೊಂಡಿರಬಾರದು ಎನ್ನುವುದು ಅವನ ಉದ್ದೇಶ. ತನ್ನ ಅರಮನೆಯಲ್ಲಿಯೂ ಸಹ ದಿನನಿತ್ಯದ ಅನ್ನದಾನದಲ್ಲಿ ಯಾವ ಲೋಪವೂ ಜರುಗದಂತೆ ಅವನು ನೋಡಿಕೊಂಡಿದ್ದನು. ರಾಜ್ಯದಲ್ಲೆಲ್ಲ ಅನ್ನಸತ್ರದ ಏರ್ಪಾಟು ಮಾಡಿದ್ದನು. ಇದರಿಂದ ಅವನ ಕೀರ್ತಿ ವಿಸ್ತರಿಸಿತು. ಏಕಾಗ್ರಬುದ್ಧಿ ಮತ್ತು ಸದುದ್ದೇಶಗಳಿಂದ ಅವನು ಜ್ಯೋತಿಯಂತೆ ಬೆಳಗತೊಡಗಿದನು.

ಒಮ್ಮೆ ಮುಸ್ಸಂಜೆಯ ಹೊತ್ತಿನಲ್ಲಿ ಕೆಲವು ಹಂಸಗಳು ರಾಜಾ ಜಾನಶ್ರುತಿಯ ಅರಮನೆಯ ಮೇಲಿಂದ ಹಾರಿಹೋಗುತ್ತಿದ್ದವು. ಅವನು ಆ ಹೊತ್ತಿನಲ್ಲಿ ಅರಮನೆಯ ಉಪ್ಪರಿಗೆಯ ಮೇಲೆ ವಿಶ್ರಮಿಸಿಕೊಂಡಿದ್ದನು. ಹಂಸಗಳ ಮಾತುಕತೆ ಅವನ ಕಿವಿಗೆ ಬಿದ್ದಿತು. ಹಂಸಗಳ ಹಿಂಡಿನಲ್ಲಿ ಯಾವುದೋ ಒಂದು ತನ್ನ ಸಂಗಾತಿಗೆ ಹೇಳುತ್ತಿತ್ತು.

''ಓ ಭಲ್ಲಾಕ್ಷ, ಜಾಗ್ರತೆ ವಹಿಸು. ಇದು ಜಾನಶ್ರುತಿಯ ಪ್ರದೇಶ. ಅವನ ಧವಲಕೀರ್ತಿ ವಿಶಾಲವಾಗಿ ಹರಡಿದೆ. ಅವನದು ದ್ಯುಲೋಕದಂತೆ ಪ್ರಖರವಾದ ಕೀರ್ತಿ. ಅದು ನಿನ್ನ ಮೇಲೆ ಬಿದ್ದರೆ ನೀನು ಇನ್ನಿಲ್ಲವಾಗುವೆ.''

ಅದಕ್ಕೆ ಉತ್ತರವಾಗಿ ಭಲ್ಲಾಕ್ಷ ನುಡಿಯಿತು : ''ಪ್ರಸಿದ್ಧ ಜ್ಞಾನಿ ರೈಕ್ವನನ್ನು ನಾನು ಬಲ್ಲೆ. ಅವನು ಗಾಡಿಯಲ್ಲಿ ಕುಳಿತಿರುತ್ತಾನೆ. ಅವನಿಗೆ ವಿಶ್ರುತವಾದ ಕೀರ್ತಿಯಿದೆ. ರೈಕ್ವನೊಡನೆ ಹೋಲಿಸಿದರೆ ಉಪ್ಪರಿಗೆಯಲ್ಲಿರುವ ರಾಜಾ ಜಾನಶ್ರುತಿ ಹೇಗೆ ಕಾಣಿಸುತ್ತಾನೆ ಹೇಳು ?''

ಮೊದಲು ಮಾತನಾಡಿದ ಹಂಸ ಈಗ ಪೆಚ್ಚಾಗಬೇಕಾಯಿತು. ''ರೈಕ್ವ! ಗಾಡಿಯೊಳಗೆ ಇರುವ ರೈಕ್ವ ಅಂದರೆ ಅವನೆಂಥವನು !'' ಎಂದು ಪ್ರಶ್ನಿಸಿತು. ಆಗ ಭಲ್ಲಾಕ್ಷ ಹೆಸರಿನ ಹಂಸ ವಿವರಿಸತೊಡಗಿತು –

''ರೈಕ್ವನು ಭೇದರಹಿತ ಪ್ರಜ್ಞೆಯುಳ್ಳವನು. ಹೀಗಾಗಿ ಜನರು ಒಳ್ಳೆಯದನ್ನು ಮಾಡಿದಾಗಲೆಲ್ಲ ಅದು ರೈಕ್ವನಿಗೂ ಸೇರುತ್ತದೆ. ಈ ಬುದ್ಧಿಯಿಂದಾಗಿ ಅವನ ವ್ಯಕ್ತಿತ್ವ ಅದ್ಭುತವೆನಿಸುತ್ತದೆ. ಹೀಗೆ ಪ್ರಪಂಚದ ಎಲ್ಲ ಪುಣ್ಯಗಳೂ ಅವನ ಪಾಲಿಗೆ ಬರುತ್ತವೆ.''

ರಾಜಾ ಜಾನಶ್ರುತಿಗೆ ಹಂಸಗಳ ಮಾತು ಕೇಳಿಸಿತು. ಹಾಗಾದರೆ ತನಗೆ ಅಂತಹ ಭಾಗ್ಯವಿಲ್ಲ ಎಂದು ಯೋಚಿಸಿದನು. ''ನಾನು ಮಹಾದಾನಿ, ಸರ್ವಹಿತ ಚಿಂತನೆ ಮಾಡುವವನು. ಆದರೂ ರೈಕ್ವನನ್ನೇ ಹೊಗಳುತ್ತವೆಯಲ್ಲ ಈ ಹಂಸಗಳು!'' ಇಂತಹ ಅನೇಕ ಬಗೆಯ ವಿಕಲ್ಪಗಳನ್ನು ಮನಸ್ಸಿಗೆ ತಂದುಕೊಂಡು ರಾಜಾ ಜಾನಶ್ರುತಿಯು ತಳಮಳಗೊಂಡನು. ಹಾಗಾದರೆ ಈಗಲೇ ಇದರ ಸತ್ಯವನ್ನು ಪರೀಕ್ಷಿಸಿ ತಿಳಿಯಬೇಕು ಎಂದು ನಿರ್ಧರಿಸಿಕೊಂಡು ತನ್ನ ಸೇವಕರಲ್ಲಿ ಒಬ್ಬನನ್ನು ಕರೆದು ''ಗಾಡಿಯಲ್ಲಿರುವ ರೈಕ್ವನನ್ನು ಹುಡುಕಿಕೊಂಡು ಬಾ, ಹೋಗು'' ಎಂದು ಆದೇಶ ಮಾಡಿದನು.

ಆ ಸೇವಕನು ನಗರದಲ್ಲೆಲ್ಲ ಸುತ್ತಾಡಿ ನೋಡಿದನು. ಗ್ರಾಮಗಳಲ್ಲಿ ಕೂಡ ಅಲೆದಾಡಿದನು ಎಲ್ಲ ದಿಕ್ಕುಗಳನ್ನೂ ಶೋಧಿಸಿದನು. ಆದರೆ ಗಾಡಿಯಲ್ಲಿ ಕುಳಿತ ರೈಕ್ವನು ಅವನಿಗೆ ಕಾಣಿಸಲಿಲ್ಲ. ಅದನ್ನೇ ರಾಜನಿಗೆ ವರದಿ ಮಾಡಿದನು.

ಜಾನಶ್ರುತಿಗೆ ಇದರಿಂದ ಸಮಾಧಾನವಾಗಲಿಲ್ಲ. ''ಹೋಗು, ಮತ್ತೊಮ್ಮೆ ಹುಡುಕು; ಅರಣ್ಯಗಳಲ್ಲಿ ನೋಡು; ನದಿಯ ತೀರ ಪ್ರದೇಶಗಳಲ್ಲಿ ಸುತ್ತಾಡಿ ನೋಡು. ಅವು ಬ್ರಹ್ಮಜ್ಞಾನಿಗಳು ಇರುವಂತಹ ಸ್ಥಳ.''

ಸೇವಕನು ಮತ್ತೆ ಹೊರಟನು. ಹುಡುಕಿ ನಿರಾಶೆಗೊಂಡು ಮರಳುತ್ತಿರುವ ಅವನಿಗೆ ಗಾಡಿಯ ಕೆಳಗೆ ಕುಳಿತ ಒಬ್ಬ ಮನುಷ್ಯ ಕಾಣಿಸಿದನು. ಕಜ್ಜಿಯನ್ನು ಕೆರೆದುಕೊಳ್ಳುತ್ತ ಸುಖವನ್ನು ಅನುಭವಿಸುತ್ತ ಕುಳಿತಿದ್ದ ಅವನನ್ನು ನೋಡಿ ಸೇವಕನಿಗೆ ಇವನನ್ನು ಕೇಳಿಬಿಡೋಣ ಎನ್ನಿಸಿತು. 'ಆದರೆ ಈತ ಗಾಡಿಯೊಳಗೆ ಕುಳಿತಿಲ್ಲ' ಎಂದು ಸಂದೇಹದಿಂದ ಕೇಳಲು ಅನುಮಾನಿಸಿದನು. ಅನಂತರ ''ನೀನೇ ಆ ರೈಕ್ವನೋ'' ಎಂದು ಕೇಳಿದನು. ರೈಕ್ವನು ಅನಾಸಕ್ತಿಯಿಂದ 'ನಾನೇ' ಎಂದು ಉತ್ತರಿಸಿದನು.

ಹೀಗೆ ಸೇವಕನು ಕಂಡು ಹಿಡಿದ ರೈಕ್ವನ ವಾರ್ತೆ ರಾಜನಿಗೆ ತಲುಪಿತು. ಅವನು ಮರುಕ್ಷಣದಲ್ಲಿ ರೈಕ್ವನ ಬಳಿಗೆ ಧಾವಿಸಿದನು. ರಾಜನು ಜೊತೆಗೆ ಆರುನೂರು ಹಸುಗಳನ್ನು ತೆಗೆದುಕೊಂಡು ಹೋಗಿದ್ದನು. ಅಷ್ಟೇ ಅಲ್ಲದೆ ಒಂದು ಸುಂದರ ಕಂಠಹಾರವನ್ನು ಹೇಸರಗತ್ತೆಗಳು ಎಳೆಯುತ್ತಿರುವ ಒಂದು ರಥವನ್ನು ಒಯ್ದನು. ಆ ಕಾಣಿಕೆಗಳನ್ನು ರೈಕ್ವನ ಎದುರು ಇಟ್ಟ ಮೇಲೆ ಅವುಗಳನ್ನು

ತೋರಿಸುತ್ತ ''ರೈಕ್ವನೇ, ಈ ಹಸುಗಳು ಈ ಅಶ್ವತರೀರಥ ಈ ಕಂಠಹಾರ ಈ ಎಲ್ಲವೂ ನಿನಗೇ. ನೀನು ಉಪಾಸನೆ ಮಾಡುವ ದೇವತೆ ಯಾರು ? ನನಗೂ ನಿನ್ನ ಉಪಾಸನೆಯನ್ನು ಉಪದೇಶಿಸು'' ಎಂದು ಕೇಳಿಕೊಂಡನು.

ರಾಜಾ ಜಾನಶ್ರುತಿಯು ಆಗಮಿಸಿದ ರೀತಿ, ತಂದ ಕಾಣಿಕೆಗಳನ್ನು ಒಪ್ಪಿಸುವ ಕ್ರಮ ಇವೆಲ್ಲ ರೈಕ್ವನನ್ನು ಕೆರಳಿಸಿದವು. ಅವನು ರಾಜನಿಗೆ ''ಆಹಾ ಶೂದ್ರ'' ಎಂದು ಜರಿದನು, ಅನಾದರ ತೋರಿಸಿದನು, ಕಾಣಿಕೆಗಳ ವಿವರಗಳ ಬಗ್ಗೆ ಆಸಕ್ತಿ ತೋರಿಸಲಿಲ್ಲ. ''ಸಂಪತ್ತುಗಳನ್ನು ಮುಂದಿಟ್ಟುಕೊಂಡು ನನ್ನನ್ನು ಸೆಳೆಯುತ್ತಿರುವೆಯಲ್ಲ! ನಿನ್ನ ಕಾಣಿಕೆಗಳು ನಿನ್ನ ಬಳಿಯೇ ಇರಲಿ'' ಎಂದು ಹರಿಹಾಯ್ದನು.

ಮತ್ತೊಮ್ಮೆ ಜಾನಶ್ರುತಿಯು ರೈಕ್ವನ ಬಳಿಗೆ ಹೋದನು. ಈ ಬಾರಿ ಇನ್ನೂ ಹೆಚ್ಚಿನ ಕಾಣಿಕೆಗಳನ್ನು ಒಯ್ದನು. ''ರೈಕ್ವನೇ ನೀನು ಏನೆಲ್ಲ ತಿಳಿದಿರುವೆ ಅದೆಲ್ಲವನ್ನೂ ನನಗೆ ತಿಳಿಸು. ಇವೆಲ್ಲ ನಾನು ನೀಡುವ ಕಾಣಿಕೆಗಳು. ನನ್ನ ಶಕ್ತಿ ಇಷ್ಟೇ. ಒಂದು ಸಾವಿರ ಹಸುಗಳು ಕಂಠಹಾರ ಅಶ್ವತರೀರಥ ಒಂದು ಇಡೀ ಗ್ರಾಮ ನಿನ್ನ ವಾಸಕ್ಕಾಗಿ ಮತ್ತು ನಿನ್ನ ಬಳಕೆಗಾಗಿ, ಜೊತೆಗೆ ಈ ನನ್ನ ಮಗಳು, ಇವಳು ನಿನ್ನ ಹೆಂಡತಿಯಾಗಿ ಇರುವಳು.''

ರೈಕ್ವನು ಮತ್ತೆ ಅದೇ ತಿರಸ್ಕಾರದಿಂದ 'ಶೂದ್ರ' ಎಂದು ಜರಿದನು. ''ಜ್ಞಾನಕ್ಕೆ ಇವೆಲ್ಲ ಸರಿಸಮ ಎಂದು ತಿಳಿದಿರುವೆಯಲ್ಲ. ಇರಲಿ. ಆದರೆ ನಿನ್ನ ಮಗಳನ್ನು ಮುಂದಿಟ್ಟುಕೊಂಡು ನನ್ನ ಬಾಯಿ ಬಿಡಿಸುತ್ತಿದ್ದೀಯೆ. ಆದ್ದರಿಂದ ನಿನ್ನ ಮಾತಿಗೆ ಒಪ್ಪಿಕೊಂಡಿದ್ದೇನೆ.''

ಇದನ್ನು ಕೇಳಿ ಜಾನಶ್ರುತಿಗೆ ಸಂತೋಷವಾಯಿತು. ಮಹಾವೃಷದೇಶದಲ್ಲಿ ರೈಕ್ವನು ಆ ತನಕ ಯಾವ ಯಾವ ಗ್ರಾಮಗಳಲ್ಲಿ ವಾಸಮಾಡಿದ್ದನೋ ಆ ಎಲ್ಲ ಗ್ರಾಮಗಳನ್ನೂ ದಾನವಾಗಿ ನೀಡಿದನು. ಆ ಗ್ರಾಮಗಳುಳ್ಳ ಪ್ರದೇಶವು ಮುಂದೆ 'ರೈಕ್ವಪರ್ಣ' ಎಂಬ ಹೆಸರಿನಲ್ಲಿ ವಿಖ್ಯಾತವಾಗಲಿ ಎಂದು ಆದೇಶ ನೀಡಿದನು.

ರೈಕ್ವನಿಗೆ ರಾಜಾ ಜಾನಶ್ರುತಿಯ ಲೌಕಿಕ ಸಾಧನೆ ಏನೆಂಬುದು ತಿಳಿದಿತ್ತು. ಅವನು ರಾಜ ನಡೆಸುವ ಅನ್ನದಾನದ ಕುರಿತು ಬಹಳ ಕೇಳಿದ್ದನು. ಈ ರಾಜ ನೊಬ್ಬ ಭೇದವಾದಿ. ಅನೇಕತ್ವವನ್ನು ನಂಬುವವನು. ರಾಜನ ಚಟುವಟಿಕೆಗಳೇ ಇದನ್ನೆಲ್ಲ ಹೇಳುತ್ತದೆ. ಇದನ್ನೆಲ್ಲ ಯೋಚಿಸಿ ರೈಕ್ವನು ಹೀಗೆ ಹೇಳಿದನು –

''ವಾಯು ಮತ್ತು ಪ್ರಾಣಗಳು ಪರಮಾತ್ಮನ ಪಾದಗಳು. ನಮಗೆ ಗೋಚರಿಸುವ ಪರಮಾತ್ಮನ ಶರೀರ ಇಷ್ಟೇ. ಪಾದಗಳನ್ನೇ ನಾವು ಪರಮಾತ್ಮನೆಂದು ಅರ್ಚಿಸಬೇಕು. ಪರಮಾತ್ಮನಿಗೆ ವಿಶ್ವವೇ ದೇಹ. ವಿಶ್ವದೇಹಿಗೆ

ವಾಯು ಪಾದ. ನಾವು ದೇವತೆಯೆಂದು ಪೂಜಿಸುವ ಎಲ್ಲ ಪ್ರಕೃತಿಗಳೂ ವಾಯುವಿನಲ್ಲಿ ಲೀನವಾಗುತ್ತವೆ. ಅಗ್ನಿಯನ್ನು ದೇವತೆ ಅನ್ನುತ್ತೇವೆ; ಅಗ್ನಿ ಆರಿದಾಗ ವಾಯುವಿನಲ್ಲಿ ಲೀನವಾಗುತ್ತದೆ. ಸೂರ್ಯನನ್ನು ದೇವತೆ ಅನ್ನುತ್ತೇವೆ; ಅಸ್ತಮಿಸಿದಾಗ ಸೂರ್ಯ ವಾಯುವಿನಲ್ಲಿ ಲೀನವಾಗುತ್ತಾನೆ. ಚಂದ್ರನನ್ನು ದೇವತೆ ಎನ್ನುತ್ತೇವೆ; ಅಸ್ತಮಿಸುವ ಚಂದ್ರ ವಾಯುವಿನಲ್ಲಿ ಲೀನವಾಗುತ್ತಾನೆ. ಜಲವನ್ನು ದೇವತೆ ಅನ್ನುತ್ತೇವೆ; ಒಣಗುವ ನೀರು ವಾಯುವಿನಲ್ಲಿ ಲೀನವಾಗುತ್ತದೆ.''

''ಇನ್ನು ನಮ್ಮ ದೇಹವೆಂಬ ವಿಶ್ವವೂ ಇದೇ ಕ್ರಮದಲ್ಲಿ ಅಸ್ತಿತ್ವ ಹೊಂದಿದೆ. ಉದಾಹರಣೆಗೆ : ನಿದ್ರಿಸುತ್ತಿರುವ ಮನುಷ್ಯ. ಅವನ ವಾಕ್ಕು ಪ್ರಾಣದಲ್ಲಿ ಲೀನವಾಗುತ್ತದೆ, ಚಕ್ಷು ಪ್ರಾಣದಲ್ಲಿ ಲೀನವಾಗುತ್ತದೆ, ಶ್ರೋತ್ರವು ಪ್ರಾಣದಲ್ಲಿ ಲೀನವಾಗುತ್ತದೆ, ಮನಸ್ಸು ಪ್ರಾಣದಲ್ಲಿ ಲೀನವಾಗುತ್ತದೆ.''

''ಹೀಗೆ ಭೇದವುಳ್ಳ ಗೋಚರ ಮತ್ತು ಅಗೋಚರಗಳ ಅದು-ಇದುಗಳೆಲ್ಲ ಪರಮಾರ್ಥದಲ್ಲಿ ಅಳೆಯುತ್ತ ಬರುವಾಗ ಅಳಿದ ಭೇದಗಳು ವಾಯುವಿನಲ್ಲಿ ಹಾಗೂ ಪ್ರಾಣದಲ್ಲಿ ಲೀನವಾಗುತ್ತ ಬರುವಾಗ, ವಾಯು ವಿಶ್ವರೂಪನಾದ ಪರಮಾತ್ಮನ ಪಾದವಾಗಿರುವಾಗ, ಪ್ರಾಣವು ಶರೀರರೂಪಿ ಪರಮಾತ್ಮನ ಪಾದವಾಗಿರುವಾಗ, ನಿನ್ನ ಪ್ರಜೆಗಳೆಲ್ಲ ಉಂಡುಟ್ಟು ನೆಮ್ಮದಿಯಾಗಿರುವುದೆಂದರೇನು ? ಇಲ್ಲಿ ತಿನ್ನುವವರು ಯಾರು ? ಬಡಿಸುವವರು ಯಾರು ? ಸುಖ ಯಾವುದು ? ಸುಖಿ ಯಾರು ?

ರೈಕ್ವನ ಮಾತುಗಳಿಂದ ಮತ್ತು ಪ್ರಶ್ನೆಗಳಿಂದ ಜಾನಶ್ರುತಿಯ ಭೇದಬುದ್ಧಿಯು ಅಳಿಯಿತು. ಬಹೀರೂಪ ಹೇಗೇ ಇರಲಿ ಎಲ್ಲವೂ ಒಂದೇ, ತತ್ತ್ವಶಃ ಎಲ್ಲವೂ ಒಂದೇ; ಒಂದೇ, ಎಲ್ಲವೂ ನೇರಿ. ಎಲ್ಲವೂ ಒಂದೇ ಆಗಿರುವಾಗ ಆ ಅಖಂಡರೂಪವು ಪರಮಾತ್ಮನೇ ಎನ್ನುವ ಅರಿವನ್ನು ರಾಜನು ಪಡೆದನು. *(ಛಾಂದೋಗ್ಯ, ಅಧ್ಯಾಯ 4, ಖಂಡಗಳು 1, 2, 3)*

* * *

— ಐದು —

## ಪ್ರಾಣದ ಶ್ರೇಷ್ಠತೆ

ಇಂದ್ರಿಯಗಳು ತಮ್ಮ ಸ್ವಭಾವಕ್ಕೆ ತಕ್ಕದಾದ ಕೆಲಸ ಮಾಡಿಕೊಂಡಿದ್ದರಿಂದ ದೇಹದೊಳಗೆ ಒಂದು ವಿಧವಾದ ಹೊಂದಾಣಿಕೆ ಏರ್ಪಟ್ಟಿತ್ತು.

ಮಾತಿನಿಂದ ಮನುಷ್ಯನ ಪ್ರಭಾವವು ವಿಸ್ತರಿಸಿತು; ಏಕೆಂದರೆ ಒಂದು ವಲಯವನ್ನು ಉಂಟು ಮಾಡುವುದು ಮಾತಿನ ಸ್ವಭಾವ. ಕಣ್ಣನ್ನು ಅಂದರೆ ಚಕ್ಷುಸ್ಸನ್ನು ಪ್ರತಿಷ್ಠೆ ಎಂದು ಗುರುತಿಸಲಾಯಿತು; ಏಕೆಂದರೆ ಕಣ್ಣು ದೇಶ-ಕಾಲವನ್ನು ಗಮನಿಸುತ್ತ ಸಹಕರಿಸತೊಡಗಿತು. ಶ್ರೋತ್ರವನ್ನು ಐಶ್ವರ್ಯವೆಂದು ಕರೆಯಲಾಯಿತು; ಏಕೆಂದರೆ ಕಿವಿ ತನ್ನ ಶ್ರವಣಗುಣದಿಂದ ಅಂತರಂಗವನ್ನು ತುಂಬತೊಡಗಿತು. ಮನಸ್ಸು ಈ ಎಲ್ಲ ಇಂದ್ರಿಯಗಳಿಗೂ ಆಶ್ರಯ ನೀಡುತ್ತ ಆಶ್ರಯ ಎಂದು ಕರೆಸಿಕೊಂಡಿತು. ಹೀಗಿದ್ದರೂ ಜ್ಯೇಷ್ಠತ್ವವು ಪ್ರಾಣಕ್ಕೆ ಸಿಕ್ಕಿತು. ಗರ್ಭದಲ್ಲಿರುವಾಗಲೇ ಪ್ರಾಣವು ದೇಹವನ್ನು ಪ್ರವೇಶಿಸುವುದೂ ಗರ್ಭದಿಂದಲೇ ತನ್ನ ಕರ್ತವ್ಯದಲ್ಲಿ ತೊಡಗಿರುವುದೂ ಅದಕ್ಕೆ ಈ ಹಿರಿಮೆ ಸಿಗಲು ಕಾರಣವಾದವು. ಹೀಗೆ ಪ್ರಾಣವು ಶ್ರೇಷ್ಠವೆನ್ನಿಸಿಕೊಂಡಿತು.

ಒಮ್ಮೆ ಇಂದ್ರಿಯಗಳೆಲ್ಲ ಸೇರಿ ಶ್ರೇಷ್ಠತ್ವದ ಪ್ರಶ್ನೆಯನ್ನೆತ್ತಿಕೊಂಡು ಚರ್ಚಿಸತೊಡಗಿದವು. ಚರ್ಚೆಯಲ್ಲಿ ಹಠ ತಲೆದೋರಿದ್ದರಿಂದ ಯಾವುದೂ ಕೊನೆ ಮುಟ್ಟಲಿಲ್ಲ. ಇಂದ್ರಿಯಗಳೆಲ್ಲ ಒಟ್ಟಾಗಿ ಪ್ರಜಾಪತಿಯಾದ ಪರಮಾತ್ಮನ ಬಳಿಗೆ ವಿವಾದವನ್ನು ಒಯ್ದವು ಪ್ರಜಾಪತಿಗೆ ಒಂದು ಉಪಾಯ ಹೊಳೆಯಿತು. ಇದು ಬರೀ ಬುದ್ಧಿವಾದದಿಂದ ಅಥವಾ ತರ್ಕದಿಂದ ಬಗೆಹರಿಯದು. ಪರಮಾತ್ಮನು ಯೋಚಿಸಿದ ನಂತರ ಹೀಗೆ ಹೇಳಿದನು :

''ನಿಮ್ಮ ವಿವಾದ ನನಗೆ ಅರ್ಥವಾಯಿತು. ಇದು ಮುಖ್ಯ ಪ್ರಶ್ನೆಯೊಂದೇ ಅಲ್ಲ. ಇದೊಂದು ದೊಡ್ಡ ಸಂದೇಹವೂ ಹೌದು. ಇದನ್ನು ಬಗೆಹರಿಸಬೇಕು. ನೀವೇ ಇದನ್ನು ತೀರ್ಮಾನಿಸಿಕೊಳ್ಳಬಹುದು. ನಿಮ್ಮಲ್ಲಿ ಯಾರು ಶರೀರವನ್ನು ತೊರೆದು ನಿರ್ಗಮಿಸಿದರೆ ಶರೀರವು ಅತ್ಯಂತ ದುರವಸ್ಥೆಯನ್ನು ತಲುಪುವುದೋ ಅಂತಹ ಇಂದ್ರಿಯವೇ ಶ್ರೇಷ್ಠವಾದುದು. ಇದನ್ನು ಮನಗಂಡರೆ ನಿಮ್ಮ ಶ್ರೇಷ್ಠತೆಯ ವಿವಾದವು ಕೊನೆಗೊಳ್ಳುತ್ತದೆ.''

ಇಂದ್ರಿಯಗಳು ಈ ಮಾತನ್ನು ಪರೀಕ್ಷಿಸಲು ಮುಂದಾದವು. ಬಲು ಮಾತುಗಾರಿಕೆಯ ವಾಕ್ಕು ತಾನು ಮೊದಲು ಎಂದಿತು; ದೇಹದಿಂದ ನಿರ್ಗಮಿಸಿತು. ಹೀಗೆ ಒಂದು ವರ್ಷ ಉರುಳಿದ ಮೇಲೆ ತಿರುಗಿ ಬಂದು ಉಳಿದ ಇಂದ್ರಿಯಗಳನ್ನು ಕೇಳಿತು : ''ನಾನಿಲ್ಲದೆ ನೀವು ಹೇಗೆ ಬದುಕಿದಿರಿ ?''

ಇಂದ್ರಿಯಗಳು ವಿವರಿಸಿದವು : ''ಮೂಕರಂತೆ ಬದುಕಿದೆವು. ಮಾತಾಡದೆ; ಆದರೆ ಪ್ರಾಣದಿಂದ ಉಸಿರನ್ನು ಧಾರಣೆ ಮಾಡುತ್ತ ಕಣ್ಣುಗಳಿಂದ

ನೋಡುತ್ತ ಕಿವಿಗಳಿಂದ ಕೇಳುತ್ತ ಮನದಿಂದ ಯೋಚಿಸುತ್ತ ನಮಗೆ ಬದುಕುವುದು ಸುಲಭವೆನಿಸಿತು.''

ಇದನ್ನು ಕೇಳಿ ವಾಕ್ಕಿಗೆ ನಿರಾಶೆಯಾಯಿತು; ಅದು ಮತ್ತೆ ದೇಹದೊಳಗೆ ಸೇರಿಕೊಂಡಿತು. ಅನಂತರ ದೃಷ್ಟಿಗೆ ತನ್ನ ಹಿರಿಮೆಯನ್ನು ಪರೀಕ್ಷಿಸಿಕೊಳ್ಳಬೇಕು ಎನ್ನಿಸಿತು. ಅದು ಶರೀರವನ್ನು ತೊರೆದು ನಿರ್ಗಮಿಸಿ ಒಂದು ವರ್ಷದ ನಂತರ ಪುನಃ ಬಂದು ಉಳಿದ ಇಂದ್ರಿಯಗಳನ್ನು ಕೇಳಿತು: ''ನಾನಿಲ್ಲದೆ ಬದುಕಿದ್ದೀರಲ್ಲ! ಇದು ಹೇಗೆ ಸಾಧ್ಯವಾಯಿತು?''

ದೃಷ್ಟಿಗೆ ಉಳಿದ ಇಂದ್ರಿಯಗಳು ಹೇಳಿದವು: ''ನೀನಿಲ್ಲದೆಯೂ ಬದುಕಲು ಸಾಧ್ಯವಾಯಿತು. ಆದರೆ ಕುರುಡರಂತೆ ಬದುಕಿದೆವು.. ದೃಷ್ಟಿಯೊಂದು ಇರಲಿಲ್ಲ ಅಷ್ಟೆ. ಪ್ರಾಣ ಉಸಿರಾಡಿತು. ವಾಕ್ಕು ಮಾತಾಡಿತು. ಕಿವಿ ಕೇಳಿತು. ಮನಸ್ಸು ಯೋಚಿಸಿತು.''

ಆಗ ಭ್ರಮನಿರಸನಗೊಂಡ ದೃಷ್ಟಿಯು ಕಣ್ಣನ್ನು ಸೇರಿತು. ದೃಷ್ಟಿಯ ನಂತರ ಶ್ರವಣಶಕ್ತಿ ನಿರ್ಗಮಿಸಿತು. ಒಂದು ಸಂವತ್ಸರ ಹೊರಗುಳಿದು ತಿರುಗಿ ಬಂದು ಅದೇ ಪ್ರಶ್ನೆಯನ್ನು ಕೇಳಿತು. ಉಳಿದ ಇಂದ್ರಿಯಗಳೂ ಅದೇ ಉತ್ತರ ನೀಡಿದವು :

''ನಾವು ಕಿವುಡರಂತೆ ಬದುಕಿದೆವು. ಆದರೆ ಪ್ರಾಣ ಉಸಿರಾಡಿತು, ದೃಷ್ಟಿ ನೋಡಿತು, ವಾಕ್ಕು ನುಡಿಯಿತು, ಮನವು ಯೋಚಿಸಿತು.''

ತಾನಿಲ್ಲದೆಯೂ ದೇಹವು ದುರವಸ್ಥೆಗೆ ಒಳಗಾಗಲಿಲ್ಲ ಮತ್ತು ದೇಹದ ದಿನನಿತ್ಯದ ಕೆಲಸಗಳನ್ನು ಉಳಿದ ಇಂದ್ರಿಯಗಳು ಹೇಗೆ ನಿಭಾಯಿಸಿಕೊಂಡು ಹೋದವು ಎನ್ನುವುದನ್ನು ಅರಿತು ಶ್ರವಣಶಕ್ತಿಯ ಹಮ್ಮು ಇಳಿಯಿತು. ಕಿವಿ ಮೊದಲಿನಂತೆ ಕೆಲಸಕ್ಕೆ ಇಳಿಯಿತು.

ಆಮೇಲೆ ಮನಸ್ಸು ಶಕ್ತಿ ಪರೀಕ್ಷೆಗೆ ಯೋಚಿಸಿತು. ಮನಸ್ಸು ಎಲ್ಲದಕ್ಕೂ ಆಶ್ರಯ. ಮನಸ್ಸು ಗೆಲ್ಲುತ್ತದೆ ಎಂಬುದು ಎಲ್ಲರ ಯೋಚನೆಯಾಗಿತ್ತು. ಮನಸ್ಸು ಪರೀಕ್ಷಾರ್ಥವಾಗಿ ಒಂದು ವರ್ಷ ಉತ್ಕ್ರಮಿಸಿ ದೂರ ಉಳಿದು ಹಿಂತಿರುಗಿತು.

ಆಗ ಇಂದ್ರಿಯಗಳು ತಲ್ಲಣವಿಲ್ಲದೆ ಶಾಂತವಾಗಿ ಮನಸ್ಸಿಗೆ ತಿಳಿಸಿದವು: ''ಮನಸ್ಸು ನಿರ್ಗಮಿಸಿದರೂ ನಾವು ಬದುಕಿದೆವು. ಮಗುವಿನಂತೆ ಮುಗ್ಧವಾಗಿದ್ದೆವು. ಈ ಒಂದು ವರ್ಷ ಏನನ್ನೂ ಯೋಚಿಸಲಾಗಲಿಲ್ಲ. ಆದರೆ ಪ್ರಾಣ ಉಸಿರಾಡಿತು, ವಾಕ್ಕು ಮಾತಾಡಿತು, ಕಿವಿ ಕೇಳಿತು, ಕಣ್ಣು ನೋಡಿತು. ಒಟ್ಟಿನಲ್ಲಿ ನೆಮ್ಮದಿಗೆ ಚ್ಯುತಿಬಾರದೆ ಮಗುವಾಗಿ ಬದುಕಿದೆವು.''

ಮನಸ್ಸಿಗೆ ತನ್ನ ಶ್ರೇಷ್ಠತೆಯ ಭ್ರಮೆ ಕರಗಿತ್ತು. ತಾನಿಲ್ಲದೆಯೂ ಈ ದೇಹ ದುರವಸ್ಥೆಯಿಂದ ದೂರ ಉಳಿದಿದೆ. ತಾನು ಶ್ರೇಷ್ಠನಲ್ಲ ಎಂದುಕೊಳ್ಳುತ್ತ ದೇಹದೊಳಗೆ ಸೇರಿಕೊಂಡಿತು.

ಈಗ ಪ್ರಾಣ ತನ್ನ ಸರದಿ ಎಂದಿತು. ಪ್ರಾಣ ದೇಹದಿಂದ ಹೊರಗೆ ಹೊರಟಾಗ ಶ್ರೇಷ್ಠ ಕುದುರೆ ಓಟಕ್ಕೆ ನಿಲ್ಲುವಾಗ ತನ್ನ ಕಾಲನ್ನು ಕಟ್ಟಿದ ಗೂಟವನ್ನು ಜಾಡಿಸಿ ಕಿತ್ತೆಸೆಯುವಂತೆ ಇಂದ್ರಿಯಗಳನ್ನು ಕಿತ್ತೆಸೆಯತೊಡಗಿತು. ಆಗ ಇಂದ್ರಿಯಗಳಿಗೆ ತಮ್ಮ ಸ್ಥಿತಿಯ ಅರಿವಾಯಿತು. ಎಲ್ಲ ಒಟ್ಟಾಗಿ ಪ್ರಾಣವನ್ನು ಬೇಡಿಕೊಂಡವು –

''ಭಗವನ್, ನೀನೇ ನಮ್ಮೆಲ್ಲರಿಗಿಂತ ಶ್ರೇಷ್ಠ. ನೀನೇ ಹಿರಿಯ: ನೀನೇ ಜ್ಯೇಷ್ಠ. ನಿರ್ಗಮಿಸಬೇಡ. ನಾವೆಲ್ಲ ದುರವಸ್ಥೆಗೆ ತಲುಪುತ್ತೇವೆ; ಈ ದೇಹ ಕೊಳೆಯುತ್ತದೆ.''

ನಂತರ ವಾಕ್ಕು ಮುಂದೆ ಬಂದು ''ನನ್ನ ಮಾತಿನ ಶಕ್ತಿಯು ನನಗೆ ಸೇರಿಲ್ಲ, ನಿಜವಾಗಿಯೂ ಅದು ನಿನ್ನದೇ ಶಕ್ತಿ, ನಿನ್ನ ಕೃಪೆ ನನ್ನ ಶಕ್ತಿ'' ಎಂದಿತು.

ಆಗ ಕಣ್ಣು ಮುಂದೆ ಬಂದಿತು. ''ನನ್ನ ದೃಷ್ಟಿ ನನ್ನದಲ್ಲ. ಅದು ನಿನ್ನ ಶಕ್ತಿ, ನಿನ್ನ ಕೃಪೆ'' ಎಂದು ಪ್ರಾಣಕ್ಕೆ ನಿವೇದಿಸಿಕೊಂಡಿತು.

ಆಗ ಕಿವಿಗಳು ಮುಂದೆ ಬಂದವು. ''ನಮ್ಮ ಶ್ರವಣಶಕ್ತಿಯು ನಮ್ಮದಲ್ಲ. ನಿಜವಾಗಿಯೂ ಅದು ನಿನ್ನ ಶಕ್ತಿ, ನಿನ್ನ ಅನುಗ್ರಹ ಇವೆಲ್ಲ'' ಎಂದು ಪ್ರಾಣಕ್ಕೆ ಬಿನ್ನವಿಸಿಕೊಂಡವು.

ಆಗ ಮನಸ್ಸು ಮುಂದೆ ಬಂದಿತು. ''ನಾನು ಯೋಚನೆ ಮಾಡಬಲ್ಲೆನು. ಆದರೆ ಅದು ನಿನ್ನ ಶಕ್ತಿ. ನಿನ್ನ ಕೃಪೆಯಿಂದ ಮಾತ್ರ ನಾನು ಯೋಚಿಸಬಲ್ಲೆ.'' ಎಂದಿತು.

ಇಂದ್ರಿಯಗಳು ಹೀಗೆ ತಮ್ಮ ತಮ್ಮ ಮಿತಿಗಳನ್ನೇ ಅರಿತುಕೊಂಡವು. ಎಲ್ಲ ಇಂದ್ರಿಯಗಳ ಸ್ವಭಾವವೂ ಪ್ರಾಣದ ಸ್ವಭಾವವೇ ಆಗಿರುವುದರಿಂದ ಜನರು ತಮ್ಮೆಲ್ಲರನ್ನೂ ಪ್ರಾಣವೆಂದೇ ಬಗೆಯುತ್ತಾರೆ ಎಂದೂ, 'ಕಣ್ಣು ಮುಚ್ಚುತ್ತಿದೆ, ಇವನ ಪ್ರಾಣ ಹೋಗುತ್ತಿದೆ' ಹೀಗೆಲ್ಲ ಹೇಳುವುದರ ನಿಜವಾದ ಅರ್ಥ ಏನೆಂದೂ ಅವು ಅರಿತವು. ಪ್ರಾಣವೇ ಇಂದ್ರಿಯ ಪ್ರಾಣವೇ ದೇವತೆ ಎಂದು ರುಜುವಾತಾದ ಮೇಲೆ ಪ್ರಾಣದ ಶ್ರೇಷ್ಠತ್ವ ಪ್ರತಿಷ್ಠಿತವಾಯಿತು.

* * *

– ಆರು –

# ಮತ್ತೆ ಪ್ರಾಣ ಮತ್ತೆ ಇಂದ್ರಿಯಗಳು

ಒಂದು ನಲ ಹೀಗಾಯಿತು. ಎಲ್ಲ ಸಾತ್ವಿಕ ಪ್ರೇರಣೆಗಳೂ ಒಟ್ಟುಗೂಡಿದವು. ಅವುಗಳ ಉದ್ದೇಶ ಇಂದ್ರಿಯಗಳ ನಿಯಂತ್ರಣ. ಅದಕ್ಕಾಗಿ ಓಂಕಾರದ ಉಪಾಸನೆ ಪ್ರಾರಂಭವಾಯಿತು. ಘ್ರಾಣೇಂದ್ರಿಯದ ಶಕ್ತಿಯನ್ನು ಓಂಕಾರದಲ್ಲಿ ಇಟ್ಟುಕೊಂಡು ಉಪಾಸನೆ ಮಾಡುತ್ತ ಘ್ರಾಣಶಕ್ತಿಯ ಬಲವರ್ಧನೆಗೆ ತೊಡಗಿದವು. ಆದರೆ ತಾಮಸ ಪ್ರೇರಣೆಗಳು ಆಕ್ರಮಣ ಮಾಡಿದ ಪರಿಣಾಮವಾಗಿ ಘ್ರಾಣೇಂದ್ರಿಯದ ಶಕ್ತಿಯು ಕ್ಷೀಣಿಸಿತು. ಹೀಗೆ ಸೋತುಹೋದ ಘ್ರಾಣೇಂದ್ರಿಯವು ತಾಮಸ ಪ್ರೇರಣೆಯನ್ನೂ ಸಾತ್ವಿಕ ಪ್ರೇರಣೆಯನ್ನೂ ಏಕಪ್ರಕಾರವಾಗಿ ಪಡೆಯತೊಡಗಿತು. ಈ ದೌರ್ಬಲ್ಯದಿಂದ ಮೂಗಿಗೆ ಸುಗಂಧ ಮತ್ತು ದುರ್ಗಂಧಗಳನ್ನು ಭೇದ ಬುದ್ಧಿಯಿಲ್ಲದೆ ಗ್ರಹಿಸಬೇಕಾದ ಸ್ಥಿತಿ ಬಂದಿತು.

ಅನಂತರ ನಾತ್ವಿಕ ಪ್ರೇರಣೆಗಳು ವಾಕ್ಕನ್ನು ಆರಿಸಿಕೊಂಡವು. ಓಂಕಾರವನ್ನು ವಾಕ್‌ಶಕ್ತಿಯಲ್ಲಿ ಪ್ರತಿಷ್ಠಾಪಿನಲಾಯಿತು ವಾಗ್ದೇವತೆಯನ್ನು ಸ್ವಾಧೀನಪಡಿಸಿಕೊಂಡು ಆ ಮೂಲಕ ಇಂದ್ರಿಯಗಳ ಮೇಲೆ ಗೆಲುವು ನಾಧಿಸುವುದು ಅವುಗಳ ಗುರಿಯಾಗಿತ್ತು. ಈಗ ಕೂಡ ತಾಮಸ ಪ್ರೇರಣೆಗಳು ವಾಕ್ ಶಕ್ತಿಯನ್ನು ಬಲವಾಗಿ ಆಕ್ರಮಿಸಿಕೊಂಡು ಉಪಾಸನೆಗೆ ಭಂಗವುಂಟುಮಾಡಿದವು. ವಾಕ್ಕು ತಮದ ದಾಳಿಗೆ ಮಣಿಯಿತು. ಅಂದಿನಿಂದ ಮನುಷ್ಯ ಸತ್ಯ ಮತ್ತು ಸುಳ್ಳು ಎರಡೂ ಪ್ರೇರಣೆಗಳಿಗೆ ಒಳಗಾಗುತ್ತ ಮಾತನ್ನು ಬಳನತೊಡಗಿದನು.

ಇದೇ ರೀತಿಯಲ್ಲಿ ದೃಷ್ಟಿಯೂ ನಹ ತನ್ನ ಶಕ್ತಿಯನ್ನು ವರ್ಧಿಸಿಕೊಳ್ಳಲು ಓಂಕಾರದ ಉಪಾಸನೆಗೆ ತೊಡಗಿದಾಗ ತಾಮಸ ಪ್ರೇರಣೆಗೆ ಒಳಗಾಗಿ ದುರ್ಬಲವಾಯಿತು. ಹೀಗೆ ದೃಷ್ಟಿಗೆ ತಾಮಸ ಪ್ರೇರಣೆಯಾಗಿ ಅದು ನೋಡಬಾರದ ವಸ್ತುವೆನ್ನುವುದು ಉಳಿಯಲಿಲ್ಲ.

ನಂತರ ಶ್ರವಣೇಂದ್ರಿಯ. ಸಾತ್ವಿಕ ಪ್ರೇರಣೆಗಳು ಓಂಕಾರವನ್ನು ಶ್ರವಣೇಂದ್ರಿಯದಲ್ಲಿ ಪ್ರತಿಷ್ಠಾಪಿಸಿದವು. ಬಲಿಷ್ಠವಾದ ಶ್ರವಣೇಂದ್ರಿಯದ ಮೂಲಕ ಎಲ್ಲ ಇಂದ್ರಿಯಗಳನ್ನು ನಿಯಂತ್ರಿಸುತ್ತ ತಮಸ್ಸಿನ ಪ್ರಭಾವವನ್ನು ದೂರವಿಡುವುದು ಅವುಗಳ ಪ್ರೇರಣೆಯಾಗಿತ್ತು. ಆದರೆ ಶ್ರವಣೇಂದ್ರಿಯವೂ ಸಹ ತಮದ ದಾಳಿಗೆ ಛಿದ್ರವಾಯಿತು. ಇದರಿಂದ ಮನುಷ್ಯನಿಗೆ ಕೇಳಬೇಕಾದ

ಹಾಗೂ ಕೇಳಬಾರದ ವಿಷಯಗಳ ವಿವೇಕ ತಪ್ಪಿತು. ಶ್ರವಣಶಕ್ತಿಯ ವಿವೇಚನೆ ಕ್ಷೀಣಿಸಿತು. ಇಂದ್ರಿಯಗಳು ಹೀಗೆ ಒಂದೊಂದಾಗಿ ಸೋತು ತಮಸ್ಸಿಗೆ ಅಡಿಯಾಳಾದಾಗ ಸಾತ್ವಿಕ ಪ್ರೇರಣೆಗಳು ಮನಸ್ಸನ್ನು ಆರಿಸಿ ಕೊಂಡವು. ಓಂಕಾರವನ್ನು ಮನಸ್ಸಿನಲ್ಲಿಟ್ಟು ಉಪಾಸನೆಯನ್ನು ಆರಂಭಿಸ ಲಾಯಿತು. ಆದರೆ ಮನಸ್ಸಿನ ಎದುರಿಗೂ ಸಹ ತಾಮಸ ಪ್ರೇರಣೆಗಳು ಸೋಲಲಿಲ್ಲ. ಅವು ಪಾಪದ ರೂಪ ತಾಳಿ ಮನದ ಮೇಲೆ ದಾಳಿ ಮಾಡಿದವು. ಪಾಪಕ್ಕೆ ಮನವು ಮಣಿಯಿತು. ಅಂದಿನಿಂದ ಮನಸ್ಸಿಗೆ ಪುಣ್ಯವೊಂದೇ ಅಲ್ಲ ಪಾಪವೂ ಹಿತವೆನಿಸತೊಡಗಿತು.

ಹೀಗೆ ತಮಸ್ಸಿನ ವಿರುದ್ಧದ ಹೋರಾಟದಲ್ಲಿ ಇಂದ್ರಿಯಗಳೆಲ್ಲ ಶರಣಾದ ಮೇಲೆ ಸಾತ್ವಿಕ ಪ್ರೇಡಣೆಗಳು ಪ್ರಾಣವನ್ನು ಆರಿಸಿಕೊಂಡವು. ಪ್ರಾಣವನ್ನು ಓಂಕಾರದ ಭಾವದಲ್ಲಿ ಆರಾಧಿಸತೊಡಗಿದವು. ಈ ಬಾರಿ ತಾಮಸ ಪ್ರೇರಣೆಗಳು ಸರ್ವಶಕ್ತಿಯನ್ನೂ ಒಟ್ಟುಗೂಡಿಸಿಕೊಂಡು ಪ್ರಾಣದ ಮೇಲೆ ಎರಗಿದವು. ಆದರೆ ಪ್ರಾಣದ ಎದುರು ಈ ದಾಳಿ ಯಶಸ್ವಿಯಾಗಲಿಲ್ಲ. ಬಂಡೆಗೆ ಅಪ್ಪಳಿಸಿದ ಮಣ್ಣಿನ ಮುದ್ದೆಯಂತೆ ತಮಸ್ಸು ಪುಡಿಪುಡಿಯಾಯಿತು. ಇಂದ್ರಿಯಗಳು ಸೋತಲ್ಲಿ ಪ್ರಾಣ ಗೆದ್ದಿತ್ತು. ಪ್ರಾಣವೇ ಸಾತ್ವಿಕ ಪ್ರೇರಣೆಗಳಿಗೆ ಆಶ್ರಯವಾಯಿತು. ಹೀಗೆ ಸಾರ್ವಭೌಮವಾದ ಪ್ರಾಣವೇ ಆತ್ಮ; ಪ್ರಾಣಾತ್ಮಭಾವದಿಂದ ಬದುಕುವ ಮನುಷ್ಯನಿಗೆ ಮಾತ್ರ ಶರೀರವು ಅರ್ಥಪೂರ್ಣವೆನಿಸುತ್ತದೆ. ಪ್ರಾಣವನ್ನು ಉಪಾಸಿಸಬೇಕು, ಆತ್ಮವನ್ನು ಪ್ರಾಣದಲ್ಲಿ ಉಪಾಸಿಸಬೇಕು; ಓಂಕಾರವನ್ನು ಪ್ರಾಣಾತ್ಮಭಾವದಲ್ಲಿ ಉಪಾಸಿಸಬೇಕು. *(ಛಾಂದೋಗ್ಯ, ಅಧ್ಯಾಯ 1, ಖಂಡ 2.)*

* * *

— ಏಳು —

## ಪ್ರವಾಹಣನ ಉಪಾಖ್ಯಾನ

ಒಂದು ಸಲ, ಓಂಕಾರದ ಸ್ವರೂಪವನ್ನು ತಮ್ಮ ತಮ್ಮ ಬುದ್ಧಿಗೆ ತೋಚಿದಂತೆ ತಿಳಿದುಕೊಂಡ ಕೆಲವು ಜನರು ಅದರ ಬಗ್ಗೆ ದೀರ್ಘ ಸಂವಾದ ನಡೆಸಿದರು. ಓಂಕಾರದ ಅರಿವು ಬುದ್ಧಿಯಿಂದ ಗಳಿಸುವಂತಹುದಲ್ಲ. ಅದು ಅನುಭವವಾಗಿ ಗೃಹೀತವಾಗಬೇಕಾದುದು. ಇಲ್ಲದಿದ್ದರೆ ಅರಿವನ್ನು ಪಡೆಯುವ ಬೇರೆ ಉಪಾಯವಾದರೂ ಯಾವುದಿದೆ? ಈ ದಿಕ್ಕಿನಲ್ಲಿಯೇ ಜಿಜ್ಞಾಸೆ

ಮುಂದುವರೆಯಿತು. ಈ ಸಂವಾದದಲ್ಲಿ ಮುಖ್ಯವಾಗಿ ಭಾಗವಹಿಸಿದವರು ಶಾಲಾವತನ ಮಗ ಶಿಲಕ, ದಲ್ಭಗೋತ್ರದ ಚೈಕಿತಾಯನ, ಜೀವಲನ ಮಗ ಪ್ರವಾಹಣ. ಪ್ರವಾಹಣನು ಬ್ರಾಹ್ಮಣನಲ್ಲ. ಆದ್ದರಿಂದ ಬ್ರಾಹ್ಮಣರೇ ಮಾತಾಡಲಿ, ಅವರ ಮಾತನ್ನೇ ಕೇಳುತ್ತೇನೆ ಎಂದು ಪ್ರವಾಹಣನು ಹೇಳಿದನು. ಸಂವಾದವು ಪ್ರಾರಂಭವಾದದ್ದು ಹೀಗೆ:

**ಶಿಲಕ :** ಓಂಕಾರದ ಬಗ್ಗೆ ಕೇಳುತ್ತಿದ್ದೇನೆ. ಅದರ ನಿಜವಾದ ಸ್ವರೂಪ ಯಾವುದು ?

**ಚೈಕಿತಾಯನ :** ಸ್ವರ.

**ಶಿಲಕ :** ಸ್ವರದ ಸ್ವರೂಪ ಯಾವುದು ?

**ಚೈಕಿತಾಯನ :** ಪ್ರಾಣ

**ಶಿಲಕ :** ಪ್ರಾಣದ ಸ್ವರೂಪ ?

**ಚೈಕಿತಾಯನ :** ಅನ್ನ

**ಶಿಲಕ :** ಅನ್ನದ ಮೂಲ ರೂಪ ಯಾವುದು ?

**ಚೈಕಿತಾಯನ :** ನೀರು

**ಶಿಲಕ :** ನೀರಿಗೆ ನಿಜ ರೂಪ ಯಾವುದು ?

**ಚೈಕಿತಾಯನ :** ಆಚೆಯ ಆ ಲೋಕ.

**ಶಿಲಕ :** ಆ ಲೋಕದ ಗತಿ ಯಾವುದು ?

**ಚೈಕಿತಾಯನ :** ಸಾಕು; ಸ್ವರ್ಗದ ಆಚೆಗೆ ಏನನ್ನೂ ಕಲ್ಪಿಸಬಾರದು.

**ಶಿಲಕ :** ಹೀಗಿರುತ್ತ, ನಿನಗೆ ಓಂಕಾರ ತಿಳಿದಿಲ್ಲ ಎಂದಾಯಿತು !

**ಚೈಕಿತಾಯನ :** ಹಾಗಾದರೆ ನೀನೇ ಹೇಳಿಬಿಡು. ಆ ಲೋಕಕ್ಕೆ ಆಶ್ರಯ ಯಾವುದು ?

**ಶಿಲಕ :** ಭೂಮಿ.

**ಚೈಕಿತಾಯನ :** ಭೂಮಿಗೆ ಆಶ್ರಯ ಯಾವುದು ?

**ಶಿಲಕ :** ಹಾಗೆ ಕೇಳಲಾಗದು. ಭೂಮಿಯೇ ಎಲ್ಲದಕ್ಕೂ ಆಶ್ರಯ. ಭೂಮಿಯಲ್ಲಲ್ಲದೆ ಬೇರೆಲ್ಲೂ ಓಂಕಾರವನ್ನು ಪ್ರತಿಷ್ಠಾಪಿಸಬಾರದು.

ಈ ಬ್ರಾಹ್ಮಣರಿಬ್ಬರ ಆಲೋಚನೆಯನ್ನು ಪ್ರವಾಹಣನು ಆಲಿಸುತ್ತ ಕುಳಿತಿದ್ದನಲ್ಲ ಅವನಿಗೆ ಈ ಇಬ್ಬರೂ ಮಾಡುತ್ತಿರುವ ತಪ್ಪಿನ ಅರಿವಾಯಿತು. ಒಬ್ಬ ಓಂಕಾರವನ್ನು ಭೂಮಿಯಲ್ಲಿ ಪ್ರತಿಷ್ಠಾಪಿಸುತ್ತಾನೆ. ಮತ್ತೊಬ್ಬ ಆ ಲೋಕದಲ್ಲಿ ಪ್ರತಿಷ್ಠಾಪಿಸಬೇಕು ಎನ್ನುತ್ತಾನೆ. ಸತ್ಯ ಒಂದೇ. ಇಬ್ಬರು ಸೂಕ್ಷ್ಮಮತಿಗಳು ಅದರ ಜಾಡನ್ನು ಹಿಡಿಯಲು ಯತ್ನಿಸುತ್ತಿದ್ದಾರೆ. ಆದರೆ

ಇಬ್ಬರು ಹೊರಟುನಿಂತ ದಿಕ್ಕು ಬೇರೆ ಬೇರೆ. ಇಷ್ಟೊಂದು ಭಿನ್ನ ದಿಕ್ಕು ಹೇಗೆ ಸಾಧ್ಯ? ಈ ಬೌದ್ಧಿಕ ಕ್ರಮದಲ್ಲಿ ಪ್ರವಾಹಣನಿಗೆ ದೋಷ ಕಂಡಿತು. ಹೀಗಾಗಿ ಅವನು ಅವರಿಗೆ ಹೇಳಿದನು: ''ಓಂಕಾರದ ವಿವೇಚನೆ ಮಾಡುವಾಗ ನೀವಿಬ್ಬರೂ ತಪ್ಪಿದಂತೆ ನನಗೆ ತೋರುತ್ತದೆ.''

''ಹಾಗಾದರೆ ನೀನೇ ಹೇಳು.'' ಎಂದು ಅವರಿಬ್ಬರೂ ಪ್ರವಾಹಣನನ್ನು ಆಹ್ವಾನಿಸಿದರು. ಆಗ ಪ್ರವಾಹಣನು ತನ್ನ ಗ್ರಹಿಕೆಯನ್ನು ವಿವರಿಸತೊಡಗಿಸು.

''ಇದು ಸುಲಭ. ನಮ್ಮ ಅನುಭವಗಳಿಗೆ ನಮ್ಮ ಇಂದ್ರಿಯಗಳೇ ಸಾಕ್ಷಿಯಾಗಬೇಕು. ನಮ್ಮ ವಿವೇಕವಾಗಲೀ ತಿಳುವಳಿಕೆಯಾಗಲೀ ಇಂದ್ರಿಯ ಗಳು ಏನನ್ನು ಗ್ರಹಿಸುತ್ತವೆಯೋ ಅವುಗಳಿಂದಲೇ ಹುಟ್ಟಬೇಕು. ನಾವು ಗಮನಿಸಿದ್ದೇವೆ-ಆಕಾಶದಿಂದ ತೇಜಸ್ಸು ಹುಟ್ಟುತ್ತದೆ, ತೇಜಸ್ಸಿನಿಂದ ನೀರು, ನೀರಿನಿಂದ ಅನ್ನ, ಅನ್ನ ಅಂದರೆ ಈ ಲೋಕ. ಆದುದರಿಂದ ಈ ಲೋಕಕ್ಕೆ ಆಕಾಶವೇ ಆಶ್ರಯ. ಸರ್ವೋಪಕಾರಕವಾದ ಆಕಾಶವೇ ಅನಂತ ಬ್ರಹ್ಮ. ಓಂಕಾರದ ಬುದ್ಧಿಯನ್ನು ಆಕಾಶದಲ್ಲಿ ನೆಟ್ಟು ಉಪಾಸನೆ ಮಾಡಬೇಕು.'' *(ಛಾಂದೋಗ್ಯ, ಅಧ್ಯಾಯ 1, ಖಂಡಗಳು 8, 9)*

''ನಾನು ಬ್ರಹ್ಮವೆಂದು ಉಲ್ಲೇಖಿಸಿ ಹೇಳಿದ ಆಕಾಶವನ್ನೇ ಅಖಂಡ ಪುರುಷ ಎಂದು ಭಾವಿಸಬಾರದು. ಈ ಎಲ್ಲವನ್ನೂ ಮೀರಿ ಪುರುಷನು ಹಿಗ್ಗಿ ನಿಂತಿದ್ದಾನೆ. ಅವನು ಎಲ್ಲವನ್ನೂ ಮೀರಿದವನು. ನಾವು ಕಾಣುವ, ನಾವು ಹೆಸರಿಸುವ, ನಾವು ತಿಳಿಯಬಲ್ಲ ಇಡೀ ಜಗತ್ತು ಪುರುಷನ ಕಾಲಂಶ ಮಾತ್ರ. ಇದು ಒಂದು ಪಾದ, ಉಳಿದ ಪಾದಗಳು ಆ ಲೋಕದಲ್ಲಿವೆ.''

''ನಾನು ಬ್ರಹ್ಮ ಎಂದು ಕರೆಯುತ್ತೇನಲ್ಲ ಆ ಆಕಾಶವು ಪುರುಷನ ಬಾಹ್ಯ ರೂಪ. ಇದು ನಮಗೆ ತೋರುವ ರೂಪ. ಬಾಹ್ಯಾಕಾಶವೇ ಪುರುಷನ ಒಳಗಿನ ರೂಪ. ಒಳಗಿನ ಆಕಾಶವೇ ಹೃದಯಪದ್ಮದೊಳಗೆ ಇರುವ ಆಕಾಶ. ಇದು ಪೂರ್ಣವಾದುದು, ಇದು ಅಮೃತವಾದುದು.'' *(ಛಾಂದೋಗ್ಯ, ಅಧ್ಯಾಯ 3, ಖಂಡ 12)*

''ಆದರೆ ಈ ಹೆಸರುಗಳಿಗೆ ಉತ್ಪತ್ತಿಯಿದೆ. ರೂಪಗಳಿಗೂ ಉತ್ಪತ್ತಿಯಿದೆ. ನಿಜವೆಂದರೆ, ಜಗತ್ತು ಎಂದರೆ ಹೆಸರು. ಹೆಸರು ಮತ್ತು ರೂಪಗಳ ಹೊರತಾಗಿ ಜಗತ್ತು ಮತ್ತೇನೂ ಅಲ್ಲ. ಉತ್ಪನ್ನವಾಗುವ ಮೊದಲು ಈ ಜಗತ್ತಿಗೆ ನಾಮವಿರಲಿಲ್ಲ ರೂಪವೂ ಇರಲಿಲ್ಲ. ಆಗ ಜಗತ್ತು ಅಸತ್ ಆಗಿತ್ತು. ಅಂದರೆ ವ್ಯಕ್ತವಾಗಿರಲಿಲ್ಲ. ಅಸತ್ತಿನಿಂದ ಸತ್ ಉಂಟಾಯಿತು. ಅಂದರೆ ನಾಮ-ರೂಪಗಳ ಉಗಮವಾಯಿತು. ಬೀಜದಿಂದ ಸಸ್ಯ ಮೊಳೆಯುವಂತೆ ಸದ್ವಸ್ತು

ಪ್ರಕಟವಾಗತೊಡಗಿತು. ಸದ್ವಸ್ತು ಅಂಡವಾಯಿತು. ಮೊಟ್ಟೆಗಳಿಂದ ಹಕ್ಕಿಯು ಪ್ರಕಟವಾಗುವಂತೆ ಅಂಡಾಕಾರದ ಸದ್ವಸ್ತು ಪ್ರಕಟವಾಯಿತು. ಮೊದಲು ಮೊಟ್ಟೆ ಎಷ್ಟೋ ಕಾಲಗಳವರೆಗೆ ಅದೇ ನಾಮ-ರೂಪಗಳಿಂದ ನಿಂತಿತ್ತು. ಮೊಟ್ಟೆ ಬಿರಿದುಕೊಂಡು ಅದರ ಹೋಳುಗಳು ವಿಸ್ತರಿಸಿದವು.''

''ಹೀಗೆ ಬಿರಿಯಿತಲ್ಲ, ಆ ಮೊಟ್ಟೆಯ ಬಿಳಿಯ ಭಾಗ ಭೂಮಿಯಾಯಿತು. ಹೊಳಪುಳ್ಳ ಭಾಗ ದ್ಯುಲೋಕವಾಯಿತು. ಮೊಟ್ಟೆಯ ಕವಚ ಬೆಟ್ಟವಾಯಿತು. ಒಳಗಿನ ತೆಳುವಾದ ಪೊರೆ ಮೇಘಾವೃತವಾದ ಮಂಜಾಯಿತು. ರಕ್ತನಾಳಗಳು ನಾಡಿಗಳಾಗಿ ಮೂತ್ರಕೋಶವು ಸಮುದ್ರವಾಗಿ ಸದ್ವಸ್ತುವಿನ ರಚನೆ ಪೂರ್ಣವಾಯಿತು.''

''ಬಿರಿದ ಮೊಟ್ಟೆಯಿಂದ ಆದಿತ್ಯನು ಎದ್ದು ನಿಂತನು. ಜಗತ್ತಿನ ತುಂಬ ಸದ್ದು ಮೂಡಿತು. ಅದು 'ಉಲು' ಎಂಬ ಸದ್ದು. 'ಉಲು' ಸದ್ದಿನಿಂದ ಪ್ರಾಣಿಗಳೆಲ್ಲ ಎದ್ದು ನಿಂತವು. ಎಲ್ಲ ಬಯಕೆಗಳೂ ತಲೆಯೆತ್ತಿದವು.''

''ಹೀಗೆ ಇದಿಷ್ಟು ವಿವರಗಳಲ್ಲಿ ಓಂಕಾರವು ಪ್ರತಿಷ್ಠಿತವಾಗಿದೆ. ಇದನ್ನು ಧ್ಯಾನದಲ್ಲಿಟ್ಟುಕೊಂಡು ಓಂಕಾರವನ್ನು ಧ್ಯಾನಿಸಬೇಕು, ಉಪಾಸನೆ ಮಾಡಬೇಕು.'' *(ಛಾಂದೋಗ್ಯ ಅಧ್ಯಾಯ 3, ಖಂಡ 19.)*

* * *

— ಎಂಟು —

# ಸತ್ಯಕಾಮ ಜಾಬಾಲ

ಸತ್ಯಕಾಮನಿಗೆ ವೇದಾಧ್ಯಯನ ಮಾಡಬೇಕೆಂಬ ಆಶೆ ಬಲವಾಯಿತು. ಅದಕ್ಕೆ ಅವನು ಗುರುಕುಲದಲ್ಲಿ ಉಳಿದುಕೊಳ್ಳಬೇಕು, ಬ್ರಹ್ಮಚರ್ಯವನ್ನು ಪಾಲಿಸಬೇಕು, ಅದರಿಂದ ಗುರುವಿನ ಕೃಪೆಯಾಗಿ ವೇದಾಧ್ಯಯನ ಮಾಡಬೇಕು. ಸತ್ಯಕಾಮ ತಾಯಿ ಜಬಾಲ ಇರುವ ಕಡೆ ಬಂದನು! ಜಬಾಲಾ ಅಲ್ಲಲ್ಲಿ ಮನೆಗೆಲಸ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಳು. ಅದೇ ಅವಳ ವೃತ್ತಿ.

''ಅಮ್ಮ, ನಾನು ಗುರುಕುಲವನ್ನು ಸೇರಬೇಕು. ಅದಕ್ಕಾಗಿ ಆಚಾರ್ಯರಾದ ಗೌತಮ ಹಾರಿದ್ರುಮತರಲ್ಲಿಗೆ ಹೋಗುತ್ತೇನೆ. ನನ್ನ ಗೋತ್ರ ಯಾವುದು ಹೇಳಮ್ಮ ?''- ಎಂದು ತಾಯಿಯನ್ನು ಒತ್ತಾಯಿಸಿದನು.

''ಮಗು ನನಗೆ ನಿನ್ನ ಗೋತ್ರ ತಿಳಿಯದು'' ಎಂದು ತಾಯಿ ಹೇಳಿದಳು.

''ನೀನು ಯಾರ ಮಗನೋ ನಾನು ಹೇಗೆ ಹೇಳಲಿ. ಆದರೆ ಇದಿಷ್ಟು ಮಾತ್ರ ನಿಜ. ನಾನು ದಾಸಿಯಾಗಿ ಅನೇಕ ಮನೆಗಳಲ್ಲಿ ದುಡಿದವಳು. ನನ್ನ ಯೌವನದಲ್ಲಿ ನಿನ್ನನ್ನು ಮಗನನ್ನಾಗಿ ಪಡೆದೆ. ನಿನ್ನ ಗೋತ್ರ ನನಗಾದರೂ ಹೇಗೆ ಗೊತ್ತಿರಲು ಸಾಧ್ಯ? ನಾನು ಜಬಾಲಾ, ನೀನು ಸತ್ಯಕಾಮ. ಸತ್ಯಕಾಮ ಜಾಬಾಲ ಎಂದು ನೀನು ಹೇಳಿಕೊ.

ಸತ್ಯಕಾಮನು ಇದರಿಂದ ಚಿಂತೆಗೊಳಗಾಗಲಿಲ್ಲ. ತಾಯಿಯನ್ನು ನಂಬಿದ್ದರಿಂದ ಅದೇ ಸರಳ ಮನಸ್ಸಿನಿಂದ ಹೊರಟು ಗೌತಮ ಹಾರಿದ್ರುಮತನ ಗುರುಕುಲಕ್ಕೆ ಬಂದನು. ವಂದಿಸುತ್ತ, ''ಪೂಜ್ಯರೇ, ತಮ್ಮ ಬಳಿ ಬ್ರಹ್ಮಚರ್ಯವಾಸವನ್ನು ಮಾಡಬೇಕೆಂದು ಬಂದಿರುವೆನು,'' ಎಂದು ಹೇಳಿ ವಿನಯದಿಂದ ನಿಂತುಕೊಂಡನು.

''ಮಗು ನಿನ್ನ ಗೋತ್ರ ಯಾವುದು ?'' – ಗೌತಮರು ಪ್ರಶ್ನಿಸಿದರು.

''ಭಗವನ್, ನನಗೆ ಗೊತ್ತಿಲ್ಲ'' ಎಂದು ಸತ್ಯಕಾಮನು ಬಿನ್ನವಿಸಿ ಕೊಂಡನು. ''ತಾನು ಅನೇಕ ಮನೆಗಳಲ್ಲಿ ದಾಸಿಯಾಗಿ ದುಡಿಯುತ್ತಿದ್ದಾಗ ಯೌವನದಲ್ಲಿ ನಿನ್ನನ್ನು ಮಗನಾಗಿ ಪಡೆದೆ ಎಂದು ನನ್ನ ತಾಯಿ ತಿಳಿಸಿದಳು. ಅವಳಿಗೆ ಈ ಕಾರಣದಿಂದಾಗಿ ಗೋತ್ರ ಗೊತ್ತಿಲ್ಲ. ಭಗವನ್, ನಾನು ಸತ್ಯಕಾಮ, ನನ್ನ ತಾಯಿ ಜಬಾಲಾ; ಆದ್ದರಿಂದ ನಾನು ಸತ್ಯಕಾಮ ಜಾಬಾಲ. ಇಷ್ಟು ಮಾತ್ರ ನಾನು ಹೇಳಬಲ್ಲೆ. ನನ್ನನ್ನು ಸ್ವೀಕರಿಸಿ.''

ಸತ್ಯಕಾಮನ ಉತ್ತರದಿಂದ ಗೌತಮರಿಗೆ ಬಹಳ ಸಂತೋಷವಾಯಿತು. ಅವರು ಪ್ರಸನ್ನರಾಗಿ ಅವನ ಸತ್ಯವ್ರತವನ್ನು ಮೆಚ್ಚಿಕೊಂಡು ಹೇಳಿದರು – ''ಮಗು ಬ್ರಾಹ್ಮಣನಲ್ಲದವನು ಇದನ್ನು ಹೇಳಲಾರ. ಹೋಗು ಸಮಿತ್ತಿನೊಡನೆ ಬಾ. ನೀನು ಎಂದೂ ಸತ್ಯವನ್ನು ದೂರವಿಡಲಾರೆ.''

ಸತ್ಯಕಾಮನು ಸಮಿತ್ತುಗಳನ್ನು ಆರಿಸಿಕೊಂಡು ತಂದನು. ಗೌತಮರು ಅವನಿಗೆ ಶಿಷ್ಯತ್ವವನ್ನು ನೀಡಿದರು. ನಂತರ ಅವನಿಗೆ ದುರ್ಬಲವಾದ ನೂರಾರು ಹಸುಗಳನ್ನು ತೋರಿಸಿದರು. ''ಮಗು ಇವುಗಳನ್ನು ಹಿಂಬಾಲಿಸು'' ಎಂದರು.

ಶ್ರದ್ಧಾಳುವಾದ ಸತ್ಯಕಾಮನು ಹಸುಗಳ ಹಿಂದೆ ನಡೆದನು. ಇವು ಸಾವಿರವಾಗದೆ ತಾನು ಮರಳುವುದಿಲ್ಲ ಎಂದು ನಿರ್ಧರಿಸಿದನು. ಅವು ಹೋದೆಡೆಯೆಲ್ಲ ಹೋಗುತ್ತ ಮೇಯುವೆಡೆ ನಿಲ್ಲುತ್ತ ಹಿಂಬಾಲಿಸಿದನು. ಹೀಗೆ ವಾರಗಳು ಸಂದವು. ತಿಂಗಳು ವರ್ಷಗಳು ಉರುಳಿದವು. ಸತ್ಯಕಾಮನು ವಿಚಲಿತನಾಗಲಿಲ್ಲ. ಕೊನೆಗೆ ಒಂದು ದಿನ ಹಸುಗಳು ಸಾವಿರವಾದುವು.

ಮೊದಲಿನಿಂದಲೂ ದೇವತೆಗಳು ಸತ್ಯಕಾಮನನ್ನು ಗಮನಿಸುತ್ತಿದ್ದರು.

ಸತ್ಯಕಾಮನ ಮನಸ್ಸು ಸಾವಿರಕ್ಕಿಂತ ಕಡಿಮೆಯನ್ನು ಎಂದೂ ಯೋಚಿಸಿರಲಿಲ್ಲ; ಅವನು ಸೇವೆಯ ರೀತಿ-ನೀತಿಗಳನ್ನು ತಿಳಿದವನು; ಶ್ರದ್ಧೆ ಅವನ ತಪಸ್ಸು. ಮರುತ್ ಎಂಬ ದೇವತೆಗೆ ಸತ್ಯಕಾಮನನ್ನು ಮಾತನಾಡಿಸಬೇಕು ಎನ್ನಿಸಿತು. ತಕ್ಷಣ ಮರುತ್ತು ಒಂದು ಹೋರಿಯನ್ನು ಪ್ರವೇಶಿಸಿ ಹಸುಗಳ ನಡುವೆ ಅಲೆದಾಡುತ್ತ ಕೊನೆಗೆ ಸತ್ಯಕಾಮನಿಗೆ ಹೇಳಿದನು :

''ಸತ್ಯಕಾಮ, ಹಸುಗಳನ್ನು ಎಣಿಸು. ನಾವೀಗ ಸಾವಿರವಾಗಿದ್ದೇವೆ. ನಮ್ಮನ್ನು ಗುರುಕುಲಕ್ಕೆ ತಿರುಗಿ ಒಪ್ಪಿಸು. ನಿನಗೆ ಶ್ರದ್ಧೆಯಿದೆ, ನಿನಗೆ ತಪಸ್ಸಿದೆ, ನಿನಗೆ ನಾನು ಪರಮಾತ್ಮನ ಒಂದು ಅಂಶವನ್ನು ಉಪದೇಶ ಮಾಡುವೆ. ಬ್ರಹ್ಮ ಎಂದು ಕರೆಯಲ್ಪಡುವ ಪರಮಾತ್ಮನ ಒಂದು ಪಾದವಾಗಿದೆ ಈ ಅಂಶ.''

ಆಗ ಹಸುಗಳು ಆಶ್ರಮಾಭಿಮುಖವಾಗಿ ಹೆಜ್ಜೆ ಹಾಕತೊಡಗಿದವು. ಸತ್ಯಕಾಮನು ಅವುಗಳನ್ನು ಅನುಸರಿಸುತ್ತ ಹೋರಿಯನ್ನು ಭಕ್ತಿಯಿಂದ ನೋಡಿದನು. ಆಗ ಹೋರಿ ಹೇಳಿತು.

''ಪೂರ್ವ ಒಂದು ಅಂಶ, ಪಶ್ಚಿಮ ಒಂದು ಅಂಶ, ದಕ್ಷಿಣ ಒಂದು ಅಂಶ, ಉತ್ತರ ಒಂದು ಅಂಶ. ಈ ನಾಲ್ಕು ಸೇರಿ ಪರಮಾತ್ಮನ ಒಂದು ಪಾದ. ಈ ಪಾದವನ್ನು 'ಪ್ರಕಾಶವಾನ್' ಎಂದು ಕರೆಯುತ್ತಾರೆ. ಪರಮಾತ್ಮನ ಉಳಿದ ಪಾದಗಳೂ ಸಹ ನಾಲ್ಕು ನಾಲ್ಕು ಅಂಶಗಳನ್ನು ಹೊಂದಿವೆ. ಸತ್ಯಕಾಮ, ಇನ್ನೊಂದು ಪಾದದ ಉಪದೇಶವು ನಿನಗೆ ಅಗ್ನಿಯಿಂದ ಸಿಗುತ್ತದೆ.''

ಸತ್ಯಕಾಮನು ಗೋವುಗಳ ಜೊತೆಗೆ ಹೆಜ್ಜೆ ಹಾಕಿದನು. ಹಸುಗಳು ಮುಸ್ಸಂಜೆಯ ಹೊತ್ತಿಗೆ ದಾರಿಯಲ್ಲಿ ಒಂದೆಡೆ ನಿಂತುಕೊಂಡವು. ಸತ್ಯಕಾಮನೂ ಅಲ್ಲಿಯೇ ನಿಂತನು. ಸಮಿತ್ತನ್ನು ಕೂಡಿಸಿ ಬೆಂಕಿ ಉರಿಸಿದನು, ಪಕ್ಕದಲ್ಲಿ ಸೌದೆಗಳನ್ನು ಇಟ್ಟುಕೊಂಡನು; ಅಗ್ನಿಯ ಹಿಂಭಾಗದಲ್ಲಿ ಪೂರ್ವದಿಕ್ಕಿಗೆ ಮುಖಮಾಡಿ ಕುಳಿತನು. ಆಗ ಅಗ್ನಿದೇವನು ಅವನಿಗೆ ಹೀಗೆ ಉಪದೇಶ ನೀಡಿದನು :

''ಸತ್ಯಕಾಮ, ಭೂಮಿಯು ಒಂದು ಅಂಶ, ಅಂತರಿಕ್ಷ ಒಂದು ಅಂಶ. ಇವಿಷ್ಟು ಸೇರಿ ಎರಡನೆಯ ಪಾದ. ಇದನ್ನು ಪರಮಾತ್ಮನ 'ಅನಂತವಾನ್' ರೂಪ ಎಂದು ಹೇಳಲಾಗುತ್ತದೆ. ನಿನಗೆ ಇನ್ನೂ ಎರಡು ಪಾದಗಳ ಅಂದರೆ ರೂಪಗಳ ಉಪದೇಶ ಆಗಬೇಕಾಗಿದೆ. ಒಂದನ್ನು ಹಂಸವು ಉಪದೇಶಿಸುವುದು.''

ಸತ್ಯಕಾಮನ ಆ ರಾತ್ರಿಯು ಆ ಉಪದೇಶದ ಧ್ಯಾನದಲ್ಲಿಯೇ ಕಳೆಯಿತು. ಮಾರನೆಯ ದಿನ ನಸುಕು ಹರಿಯುತ್ತಿದ್ದಂತೆಯೆ ಹಸುಗಳು ಹೆಜ್ಜೆ

ಹಾಕತೊಡಗಿದವು. ಸತ್ಯಕಾಮನು ಹಿಂಬಾಲಿಸಿದನು. ಸಂಜೆ ಹಸುಗಳು ನಿಂತಲ್ಲಿ ನಿಂತನು. ಅಗ್ನಿಯು ಪ್ರಜ್ವಲಿಸುವಂತೆ ಮಾಡಿದನು. ಸಮಿತ್ತುಗಳನ್ನು ಸಂಗ್ರಹಿಸಿ ಇಟ್ಟುಕೊಂಡು ಅಗ್ನಿಯು ತಿಳಿಸಿದ ಹಂಸವನ್ನು ಮನದಲ್ಲಿ ತಂದುಕೊಳ್ಳುತ್ತ ಅಗ್ನಿಯ ಹಿಂದೆ ಪೂರ್ವಾಭಿಮುಖನಾಗಿ ಕುಳಿತುಕೊಂಡನು. ಅವನ ಶ್ರದ್ಧೆಗೆ ಒಲಿದ ಆದಿತ್ಯನು ಹಂಸವಾಗಿ ಗಾಳಿಯಲ್ಲಿ ತೇಲುತ್ತ ಬಂದನು. ಬ್ರಹ್ಮವೆಂದು ಕರೆಯಲ್ಪಡುವ ಪರಮಾತ್ಮನ ಮೂರನೆಯ ಪಾದದ ಉಪದೇಶವನ್ನು ಹಂಸವು ನೀಡಿತು-

''ಸತ್ಯಕಾಮ, ಇದು ಮೂರನೆಯ ಪಾದ. ಇದೂ ಪರಮಾತ್ಮನ ಒಂದು ಅಂಶ. ಇದೂ ಒಂದು ರೂಪ. 'ಜ್ಯೋತಿಸ್ಮಾನ್' ಎಂಬ ರೂಪ ಇದು. ಈ ರೂಪಕ್ಕೆ ಅಗ್ನಿಯು ಒಂದು ಅಂಶ, ಸೂರ್ಯನು ಒಂದು ಅಂಶ, ಚಂದ್ರನು ಒಂದು ಅಂಶ, ಇನ್ನೊಂದು ಅಂಶ ವಿದ್ಯುತ್. ನೀನಿನ್ನು ಪರಮಾತ್ಮನ ನಾಲ್ಕನೆಯ ಪಾದದ ಉಪದೇಶವನ್ನು ಪಡೆಯಬೇಕು. ಅದನ್ನು ಪ್ರಾಣವು ಉಪದೇಶಿಸುವುದು.''

ಇಷ್ಟು ಹೇಳಿದ ಹಂಸವು ಗಾಳಿಯನ್ನು ತಳ್ಳುತ್ತ ಹಾರಿ ಹೋಯಿತು. ಆ ರಾತ್ರಿ ಸತ್ಯಕಾಮನು ಹಂಸದ ಮಾತುಗಳನ್ನೇ ಧ್ಯಾನಿಸಿದನು. ರಾತ್ರಿ ಕಳೆದು ಬೆಳಕು ಚೆಲ್ಲಿದ ಕೂಡಲೆ ಹಸುಗಳು ಮಂಡಿಯೂರಿ ಎದ್ದವು. ಎದ್ದು ಆಶ್ರಮಾಭಿಮುಖವಾಗಿ ಹೊರಟವು. ಮತ್ತೆ ಅವನು ಹಸುಗಳ ಹಿಂದೆ ಹೆಜ್ಜೆ ಹಾಕಿದನು.

ಸೂರ್ಯ ಪಡುವಣಕ್ಕೆ ಇಳಿದು ಕಂತ ತೊಡಗಿದಾಗ ಹಸುಗಳು ನಿಂತವು. ಸತ್ಯಕಾಮನೂ ನಿಂತನು. ಸೌದೆಗಳನ್ನು ಸೇರಿಸಿ ಬೆಂಕಿಮಾಡಿದನು. ಪಕ್ಕದಲ್ಲಿ ಸಮಿತ್ತುಗಳನ್ನು ಕೂಡಿಸಿಟ್ಟುಕೊಂಡು ಅಗ್ನಿಯನ್ನು ಮುಂದೆ ಮಾಡಿಕೊಂಡು ಪೂರ್ವದಿಕ್ಕಿಗೆ ಮುಖಮಾಡಿ ಕುಳಿತನು. ಹಂಸ ಆಡಿದ ಕೊನೆಯ ಮಾತು ಅವನ ತಲೆಯಲ್ಲಿ ಧ್ವನಿಸತೊಡಗಿತ್ತು.

ಅಷ್ಟರಲ್ಲಿ ಒಂದು ನೀರುಕೋಳಿಯು ಅವನ ಕಡೆಗೆ ಹಾರುತ್ತ ಬಂದಿತು. ''ಸತ್ಯಕಾಮ'' ಎಂದಿತು. ''ನಿನ್ನ ಚಿತ್ತವೀಗ ಪರಮಾತ್ಮನ ನಾಲ್ಕನೆಯ ಪಾದ ವನ್ನು ಅರಿಯಲು ತವಕಪಡುತ್ತಿದೆ. ಅದನ್ನು ಪರಮಾತ್ಮನ 'ಆಯತನವಾನ್' ರೂಪ ಎನ್ನುತ್ತಾರೆ. ಇದರಲ್ಲಿ ಪ್ರಾಣ ಒಂದು ಅಂಶ, ದೃಷ್ಟಿ ಒಂದು ಅಂಶ, ಶ್ರೋತ್ರ ಒಂದು ಅಂಶ, ಮನ ಒಂದು ಅಂಶ.'' ಇಷ್ಟು ಹೇಳಿದ ನೀರುಕೋಳಿ ಹಾರಿಹೋಯಿತು.

ಸತ್ಯಕಾಮನು ಆ ರಾತ್ರಿ ಅಲ್ಲಿಯೇ ತಂಗಿದನು. ಮರುದಿನ ನಸುಕಿನಲ್ಲಿ

ಹಸುಗಳು ಎದ್ದು ಪ್ರಯಾಣವನ್ನು ಮುಂದುವರಿಸಿದವು. ಅವುಗಳ ಹಿಂದೆ ನಡೆದು ಸತ್ಯಕಾಮನು ಗುರುಕುಲವನ್ನು ಸೇರಿದನು. ಪ್ರಸನ್ನವದನನಾಗಿ ಬ್ರಹ್ಮಜ್ಞಾನಿಯಂತೆ ಪುಳಕಿತನಾಗಿದ್ದ ಶಿಷ್ಯನನ್ನು ನೋಡಿದ ಗೌತಮರು ಕೇಳಿದರು – ''ಸತ್ಯಕಾಮಾ, ನಿನಗೆ ಯಾರಿಂದ ಉಪದೇಶ ಸಿಕ್ಕಿತು ?

ಸತ್ಯಕಾಮನು ಮಾತನ್ನು ಅಡಗಿಸುತ್ತ ಆದರೆ ಸತ್ಯವನ್ನು ಮುಚ್ಚಿಡದೆ ವಿನಯದಿಂದ ''ಮನುಷ್ಯರಿಂದಲ್ಲ'' ಎಂದನು. ''ಆದರೆ ಗುರುಗಳಾದ ತಾವು ನನಗೆ ಉಪದೇಶ ನೀಡಬೇಕು. ಇದು ನನ್ನ ಪ್ರಾರ್ಥನೆ. ಗುರುಮುಖೇನ ಪ್ರಾಪ್ತವಾದ ವಿದ್ಯೆಯೇ ಶ್ರೇಷ್ಠವಾದುದು ನಿಜವಾದುದು ಎಂದು ಕೇಳಿದ್ದೇನೆ. ಗುರುಗಳು ಅನುಗ್ರಹಿಸಬೇಕು'' – ಎಂದನು.

ಆಗ ಗೌತಮರು ಯಥಾರ್ಥವನ್ನು ತಿಳಿಸಿದರು. ಪರಮಾತ್ಮನ ಅದೇ ನಾಲ್ಕು ಪಾದಗಳನ್ನು ಮತ್ತೆ ಅವನಿಗೆ ಉಪದೇಶಿಸಿದರು. ಸತ್ಯಕಾಮನ ಶ್ರದ್ಧೆ ಫಲ ನೀಡಿತು, ಸತ್ಯಕಾಮನ ಸತ್ಯ ಫಲ ನೀಡಿತು, ಸತ್ಯಕಾಮನ ತಪಸ್ಸು ಫಲ ನೀಡಿತು. ಅವನ ಸಂದೇಹ ದೂರಾಯಿತು. ಅವನು ಬ್ರಹ್ಮಚರ್ಯವನ್ನು ಮುಗಿಸಿ ಸ್ವಗ್ರಾಮಕ್ಕೆ ಮರಳಿದನು. *(ಛಾಂದೋಗ್ಯ, ಅಧ್ಯಾಯ 4 ಖಂಡಗಳು 4, 5, 6, 7, 8 ಮತ್ತು 9.)*

* * *

– ಒಂಬತ್ತು –

## ಸತ್ಯಕಾಮ, ಸತ್ಯಕಾಮನ ಶಿಷ್ಯ ಉಪಕೋಸಲ

ಕ್ರಮೇಣ ಸತ್ಯಕಾಮ ಜಾಬಾಲನು ಒಂದು ಗುರುಕುಲವನ್ನು ಕಟ್ಟಿದನು. ಸತ್ಯಕಾಮನ ಕೀರ್ತಿ ಹಬ್ಬಿತು. ದೂರದ ಊರುಗಳಿಂದ ಶಿಷ್ಯರೂ ಆಶ್ರಮಕ್ಕೆ ಬರತೊಡಗಿದರು ಅವನ ಸಾಧನೆ ಲೋಕವಿಖ್ಯಾತವಾಗಿತ್ತು. ಗುರು ಶಿಷ್ಯರಿಗೆ ಆದರ್ಶವಾದನು. ಶಿಷ್ಯರು ಗುರುವಿನ ಹಾಗೆಯೇ ಶ್ರದ್ಧೆ ತಪಸ್ಸುಗಳನ್ನು ಮೈಗೂಡಿಸಿಕೊಂಡರು; ಗುರುವಿನ ದಾರಿಯಲ್ಲಿ ನಡೆಯುತ್ತ ಬ್ರಹ್ಮಚರ್ಯದಲ್ಲಿ ನಿಂತರು. ಅನೇಕ ವರ್ಷಗಳು ಸಂದವು. ಗುರುಕುಲ ಬೆಳೆಯಿತು. ಶಿಷ್ಯರು ವಿದ್ಯಾವಿನಯ ಸಂಪನ್ನರಾಗಿ ಗೃಹಸ್ಥಾಶ್ರಮಕ್ಕೆ ಸೇರಲು ಮರಳತೊಡಗಿದರು.

ಸತ್ಯಕಾಮನ ಅನೇಕ ಶಿಷ್ಯರಲ್ಲಿ ಉಪಕೋಸಲನೂ ಒಬ್ಬ. ಅವನ ಪೂರ್ಣ ಹೆಸರು ಉಪಕೋಸಲ ಕಾಮಲಾಯನ. ಅವನು ಗುರುಕುಲದ ಅಗ್ನಿಯನ್ನು

ಹನ್ನೆರಡು ವರ್ಷಗಳ ತನಕ ಶ್ರದ್ಧಾ-ಭಕ್ತಿಗಳಿಂದ ಕಾಪಾಡಿಕೊಂಡು ಬಂದನು. ಅವನ ಸಹಪಾಠಿಗಳಿಗೆ ಗುರುವಿನ ಉಪದೇಶ ದೊರೆತು ಅವರೆಲ್ಲ ತಮ್ಮ ತಮ್ಮ ಊರುಗಳಿಗೆ ಹಿಂತಿರುಗಿದ್ದರು. ಅವರ ಅಧ್ಯಯನ ಸಾಂಗೋಪಾಂಗ ಮುಗಿದಿತ್ತು. ಉಪಕೋಸಲನಿಗೆ ಮಾತ್ರ ಗುರುವಿನ ಕೃಪೆ ದೊರೆತಿರಲಿಲ್ಲ. ಕೊನೆಗೊಮ್ಮೆ ಸತ್ಯಕಾಮನ ಹೆಂಡತಿಯೇ ಉಪಕೋಸಲನ ವಿಷಯದಲ್ಲಿ ಮರುಕಗೊಂಡು ಮಾತನಾಡಿದಳು-

''ಉಪಕೋಸಲ ಬಹಳ ಶ್ರದ್ಧಾವಂತ, ತಪೋನಿರತ. ಬ್ರಹ್ಮಚರ್ಯದಲ್ಲಿ ನಿಂತು ಆಶ್ರಮದಲ್ಲಿ ಅಗ್ನಿಗಳ ಜೋಪಾನನೆ ಮಾಡಿದ್ದಾನೆ. ಆಚಾರ್ಯರಾದ ನೀವು ಕೃಪೆ ತೋರದಿದ್ದರೆ ಅವನ ಸೇವೆಯನ್ನು ಪಡೆದ ಅಗ್ನಿದೇವತೆಗಳು ಮುನಿಯಬಹುದು...''

ಸತ್ಯಕಾಮನು ಹೆಂಡತಿಯ ಮಾತಿಗೆ ಕಿವಿಗೊಡಲಿಲ್ಲ; ತಾನು ಉದ್ದೇಶಿಸಿದ ದೀರ್ಘಕಾಲದ ಯಾತ್ರೆಗಾಗಿ ಹೊರಟುಹೋದನು.

ಆಚಾರ್ಯನ ವರ್ತನೆಯು ಉಪಕೋಸಲನನ್ನು ದುಃಖದಲ್ಲಿ ಮುಳು ಗಿಸಿತು. ಅದೇನೋ ಹೊಳೆದು ಉಪವಾಸದಿಂದ ಇರಲು ತೀರ್ಮಾನಿಸಿದನು. ''ಊಟ ಮಾಡು, ಇಂತಹ ದೇಹದಂಡನೆಗೆ ಕಾರಣವೇನು?'' ಎಂದು ಗುರುಪತ್ನಿ ವಿಚಾರಿಸಿದರೂ ಅವನು ಉಪವಾಸವನ್ನು ಮುರಿಯಲಿಲ್ಲ.

''ಅಮ್ಮ, ನನ್ನ ಮನಸ್ಸು ನಾನಾ ದಿಕ್ಕುಗಳಲ್ಲಿ ಅಲೆಯುತ್ತಿದೆ. ನಾನು ಪ್ರಾಕೃತನಂತೆ ದುರ್ಬಲನಾಗುತ್ತಿದ್ದೇನೆ. ಇಷ್ಟು ದಿನ ಗುರುಕುಲವಾಸ ಮಾಡಿದೆ. ಆದರೂ ಕೃತಾರ್ಥನಾಗಲಿಲ್ಲ. ಈ ದುಃಖ ನನ್ನನ್ನು ಕೊಲ್ಲುತ್ತಿದೆ, ನಾನು ದಣಿಯಬೇಕಾಗಿದೆ.'' – ಎಂದನು.

ಈ ಮಾತನ್ನು ಕೇಳಿದ ಅಗ್ನಿದೇವತೆಗಳು ಮರುಗಿದರು. ''ಈತ ನಮ್ಮ ಜೋಪಾಸನೆ ಮಾಡಿದವನು, ತಪೋನಿಷ್ಠನಾಗಿ ಬ್ರಹಚರ್ಯದಲ್ಲಿ ನಿಂತು ನಮ್ಮನ್ನು ಸಂಗ್ರಹಿಸಿ ಪ್ರಜ್ವಲಿಸುವಂತೆ ಮಾಡಿದ್ದಾನೆ. ಇವನಿಗೆ ನಾವೇ ಉಪದೇಶ ನೀಡೋಣ'' ಎಂದು ತೀರ್ಮಾನಿಸಿದರು.

''ಉಪಕೋಸಲ, ಇದು ಉಪದೇಶಗಳಲ್ಲೆಲ್ಲ ಅತಿ ಹೆಚ್ಚಿನ ಉಪದೇಶ. ಇದೊಂದು ಮಹಾದರ್ಶನ. ಈ ಮಹಾದರ್ಶನದಿಂದ ಸತ್ಯದ ಅರಿವು ಉಂಟಾಗುತ್ತದೆ. ನೆನಪಿಡು, ಪ್ರಾಣವು ಬ್ರಹ್ಮ, ಸುಖವು ಬ್ರಹ್ಮ, ಆಕಾಶವು ಬ್ರಹ್ಮ.''

ಉಪಕೋಸಲನಿಗೆ ಅಗ್ನಿದೇವತೆಗಳ ಮಾತು ಸರಿಯಾಗಿ ಗೃಹೀತ ವಾಗಲಿಲ್ಲ. ಪ್ರಾಣವು ಬ್ರಹ್ಮ ಎಂದು ಅವನಿಗೆ ತಿಳಿದಿತ್ತು. ಆದರೆ ಉಳಿದವು

ಬ್ರಹ್ಮ ಹೇಗೆ ? ಆ ಸಂದೇಹವನ್ನೇ ಅವನು ಬಿನ್ನವಿಸಿಕೊಂಡನು – ''ಸುಖವು ಬ್ರಹ್ಮ, ಆಕಾಶವು ಬ್ರಹ್ಮ ಎನ್ನುವ ಆದೇಶವು ನನ್ನ ಅರಿವಿನಲ್ಲಿ ಮೂಡಲಿಲ್ಲ.''

''ಉಪಕೋಸಲ, ಸುಖ ಬೇರೆ ಅಲ್ಲ, ಬ್ರಹ್ಮ ಬೇರೆ ಅಲ್ಲ. ಈ ಅರಿವು ಸುಖ. ಇದರ ಉಪಾಸನೆಯೂ ಸುಖ. ಸುಖವು ಹೃದಯದ ಅನುಭವ. ಆಕಾಶವೇ ನಮ್ಮೊಳಗಿನ ಹೃದಯ. ಆದುದರಿಂದ ಆಕಾಶವೂ ಬ್ರಹ್ಮ. ಈ ಅರಿವಿಗೆ ನಿರ್ದಿಷ್ಟವಾದ ಫಲವೂ ಸಿಗುತ್ತದೆ. ಅದನ್ನು ಆಚಾರ್ಯನೇ ಉಪದೇಶಿಸಬೇಕು. ಆಚಾರ್ಯನೇ ಅದನ್ನು ಉಪದೇಶಿಸುವನು.''

ಅಷ್ಟರಲ್ಲಿ ಆಚಾರ್ಯನಾದ ಸತ್ಯಕಾಮನು ಗುರುಕುಲಕ್ಕೆ ಹಿಂತಿರುಗಿ ಬಂದವನೇ 'ಉಪಕೋಸಲಾ' ಎಂದು ಕರೆದನು. ''ನಿನ್ನ ಮುಖದಲ್ಲಿ ಬ್ರಹ್ಮವನ್ನು ಅರಿತವನ ತೇಜಸ್ಸಿದೆ! ಯಾರಿಂದ ಉಪದೇಶ ಸಿಕ್ಕಿತು ?''

ಉಪಕೋಸಲನು ನಡೆದುದೇನೆಂದು ಆಚಾರ್ಯನಿಗೆ ಪೂರ್ತಿ ಹೇಳಲಿಲ್ಲ. 'ಇದಿಷ್ಟು ತಿಳಿಯಿತು' ಎನ್ನುತ್ತ ಅಗ್ನಿದೇವತೆಗಳು ಮಾಡಿದ ಉಪದೇಶದಲ್ಲಿ ಕೆಲವನ್ನು ಮಾತ್ರ ಹೇಳಿದನು.

ಅಗ್ನಿದೇವತೆಗಳು ಇವನಿಗೆ ಲೋಕಗಳನ್ನು ಮಾತ್ರ ಬೋಧಿಸಿವೆ ಎಂದು ಆಚಾರ್ಯರು ಅರ್ಥಮಾಡಿಕೊಂಡರು. ''ಉಪಕೋಸಲ ನಿನಗೆ ಅಗ್ನಿಗಳು ತಿಳಿಸಿದ ಲೋಕಕ್ಕಿಂತ ಉನ್ನತವಾದ ಬ್ರಹ್ಮನನ್ನು ಬೋಧಿಸುತ್ತೇನೆ. ಯಾವ ರೀತಿಯಲ್ಲಿ ತಾವರೆಯು ನೀರಿನಲ್ಲೇ ನಿಂತರೂ ಅದರ ಎಲೆಗೆ ನೀರು ಅಂಟಿಕೊಳ್ಳುವುದಿಲ್ಲವೋ ಅದೇ ರೀತಿಯಲ್ಲಿ ಬ್ರಹ್ಮದ ಅರಿವುಳ್ಳವನ ಸ್ಥಿತಿಯೂ ಇರುತ್ತದೆ. ಬ್ರಹ್ಮವನ್ನು ಅರಿತವನಿಗೆ ಈ ಲೋಕದ ಲೇಪವಿರುವುದಿಲ್ಲ.''

''ಈ ಅರಿವೂ ಕೂಡ ಒಂದು ಸ್ಥಿತಿ.. ಏಕೆಂದರೆ ಕಣ್ಣಿಗೆ ತೋರುತ್ತಿರುವುದೆಲ್ಲ ಆತ್ಮವೇ. ಬೇಕಾದರೆ 'ಅಮೃತ' ಅನ್ನು 'ಅಭಯ' ಅನ್ನು, 'ಬ್ರಹ್ಮ' ಎಂದೇ ಕರೆ. ಕಾಣುವುದೆಲ್ಲ ಶುಭವಸ್ತುವೇ. ಎಲ್ಲ ಲೋಕಗಳಿಗೂ ಹೀಗೆ ಕಾಣುವುದು ಒಂದೇ ಬೆಳಕು. ಈ ಬೆಳಕಿನಿಂದ ನಡೆದರೆ ಇಲ್ಲಿ ಈ ಸಂಸಾರದಲ್ಲಿ ಬಂಧನವೆಂಬುವುದಿಲ್ಲ; ಬಂಧನವು ಮರುಕಳಿಸುವುದೂ ಇಲ್ಲ. ನಿನಗೆ ತಾಳ್ಮೆಯಿದೆ; ನಿನ್ನಲ್ಲಿ ಶ್ರದ್ಧೆ ನೆಲೆಸಿದೆ; ನೀನು ತಪಸ್ಸುಳ್ಳವನು. ಹೀಗೆ ನೀನು ಉಪದೇಶಕ್ಕೆ ತಕ್ಕವನು.'' *(ಛಾಂದೋಗ್ಯ, ಅಧ್ಯಾಯ 4, ಖಂಡಗಳು 10-15)*

* * *

– ಹತ್ತು –

## ಉಷಸ್ತಿಯ ಯಜ್ಞೋಪಾಸನೆ

ಇದು ಕುರು ದೇಶದಲ್ಲಿ ನಡೆಯಿತು. ಅಲ್ಲಿ ಹಿಂದೆಂದೂ ಬಂದಿರದ ಭೀಕರವಾದ ಆಲಿಕಲ್ಲಿನ ಮಳೆ ಒಮ್ಮೆ ಬಿದ್ದಿತು. ಬೆಳೆಗಳು ಸತ್ತು ನೆಲಕ್ಕೊರಗಿದವು. ಜನ ಹಸಿವೆಯಿಂದ ದಿಕ್ಕೆಡತೊಡಗಿದರು. ಉಷಸ್ತಿಯು ಆಗ ವಾಸವಾಗಿದ್ದುದು ಕುರುದೇಶದ ಇಭ್ಯಗ್ರಾಮದಲ್ಲಿ. ಅವನ ಕುಟುಂಬವೆಂದರೆ ಗಂಡ ಹೆಂಡತಿ ಇಬ್ಬರೇ. ಮಳೆ ತಂದ ಅನಾಹುತ ಅವನ ಮನೆಯನ್ನೂ ಬಿಟ್ಟಿರಲಿಲ್ಲ. ಆಹಾರಕ್ಕಾಗಿ ಅವನು ಹೆಂಡತಿಯನ್ನು ಕಟ್ಟಿಕೊಂಡು ಅಲೆದಾಡುವಂತಾಯಿತು. ಅವರಿಗೆ ದಾರಿಯಲ್ಲಿ ಒಬ್ಬ ಕಂಡನು. ನೆರಳಿನಲ್ಲಿ ಕುಳಿತು ಉದ್ದಿನ ಕಾಳುಗಳನ್ನು ಒಂದೊಂದಾಗಿ ಬಾಯೊಳಗೆ ಎಸೆದುಕೊಳ್ಳುತ್ತಿದ್ದ ಅವನು ಒಬ್ಬ ಮಾವಟಿಗ. ಉಷಸ್ತಿಯು ಆ ಕಾಳುಗಳನ್ನೇ ಬೇಡಿದನು. ಮಾವಟಿಗನ ಬಳಿ ಬೇರೆ ಕಾಳುಗಳು ಇರಲಿಲ್ಲ. ಉಷಸ್ತಿಗೆ ಬೇರೆ ದಾರಿಯೂ ಇರಲಿಲ್ಲ. ಅದನ್ನೇ ಅವನು ಕೇಳಿ ಪಡೆದನು. ಕಾಳುಗಳನ್ನು ಅವನ ಬೊಗಸೆಗೆ ಹಾಕಿದ ಮೇಲೆ ಮಾವಟಿಗನು ನೀರನ್ನೂ ಅವನ ಎದುರಿಗೆ ಇಟ್ಟನು. ಆದರೆ ಉಷಸ್ತಿಯು ನೀರನ್ನು ಅತ್ತ ಸರಿಸುತ್ತ "ಬೇಡ ಇದು ಎಂಜಲು" ಎಂದುಬಿಟ್ಟನು.

ಇದರಿಂದ ಮಾವಟಿಗನಿಗೆ ಆಶ್ಚರ್ಯವಾಯಿತು. "ಈ ಉದ್ದೂ ಎಂಜಲಿಲ್ಲವೇ ?" – ಉಷಸ್ತಿಯನ್ನು ಕೇಳಿದನು.

"ಅಲ್ಲ, ಇದನ್ನು ತಿನ್ನದಿದ್ದರೆ ನನ್ನ ಜೀವ ಉಳಿಯುವುದಿಲ್ಲ. ಆದರೆ ನೀರು ಬೇರೆಡೆಯೂ ಸಿಗುತ್ತದೆ."

ತಾನು ತಿಂದು ಉಳಿದ ಕಾಳುಗಳನ್ನು ಉಷಸ್ತಿಯು ಹೆಂಡತಿಯ ಕೈಗೆ ದಾಟಿಸಿದನು. ಅವಳಿಗೆ ಆಗಲೇ ಎಲ್ಲೋ ಭಿಕ್ಷೆ ಸಿಕ್ಕಿದ್ದರಿಂದ ಅದನ್ನು ತಿನ್ನದೆ ಜೋಪಾನವಾಗಿ ಕಟ್ಟಿಟ್ಟಳು. ಆ ರಾತ್ರಿ ಹೇಗೋ ಸರಿಯಿತು. ಮುಂಗೋಳಿ ಕೂಗಿದಾಗ ಉಷಸ್ತಿಯು ಎದ್ದು ಕುಳಿತನು. ಹೊಟ್ಟೆ ಹಸಿದು ನಿತ್ರಾಣ ವಾಗಿದ್ದರಿಂದ ಅವನು ತನ್ನಷ್ಟಕ್ಕೆ ಹೇಳಿಕೊಂಡನು – "ಇಲ್ಲಿಯ ರಾಜನು ಯಾಗಕ್ಕೆ ತೊಡಗುತ್ತಾನಂತೆ. ಅಲ್ಲಿ ನನ್ನ ನೆರವೂ ಬೇಕಾಗಬಹುದು. ಋತ್ವಿಕ್ಕನ್ನಾಗಿ ನನ್ನನ್ನೂ ಆರಿಸಿಕೊಳ್ಳಬಹುದು. ನನಗೆ ನಾಲ್ಕು ಕಾಸು ಸಿಗಬಹುದು. ಆದರೆ ಈಗ ಮೊದಲು ಈ ಹಸಿವೆಯ ಬಾಯಿಗೆ ಏನಾದರೂ ಬೀಳುವಂತಾದರೆ...."

ಸೂರ್ಯೋದಯವಾಯಿತು. ಹಕ್ಕಿಗಳು ರಾಗವಾಗಿ ಮಾತನಾಡಿಕೊಂಡು ಉದ್ಘೋಷಕ್ಕೆ ತೊಡಗಿದಾಗ ಎದ್ದು ಕುಳಿತ ಉಷಸ್ತಿಯ ಹೆಂಡತಿ ನಿದ್ದೆಗಣ್ಣಿನಲ್ಲಿದ್ದಾಗ ತಾನು ಕೇಳಿಸಿಕೊಂಡ ಗಂಡನ ಮಾತುಗಳನ್ನು ನೆನಪಿಸಿಕೊಂಡು ಉಳಿದ ಎಂಜಲು ಕಾಳುಗಳನ್ನೇ ಅವನ ಮುಂದಿಟ್ಟಳು. ಆ ಕಾಳುಗಳನ್ನು ಬಾಯಿಗೆ ಎಸೆದುಕೊಳ್ಳುತ್ತ ಅವನು ಯಜ್ಞದ ಸ್ಥಳಕ್ಕೆ ನಡೆದನು.

ಅಲ್ಲಿಗೆ ಉಷಸ್ತಿಯ ಆಗಮನವು ಅನಿರೀಕ್ಷಿತವಾಗಿತ್ತು. ರಾಜನು ಆ ಯಜ್ಞದಲ್ಲಿ ಯಜಮಾನನಾಗಿ ಕುಳಿತುಕೊಳ್ಳುವವನು. ಅವನು ಉಷಸ್ತಿಯನ್ನು ನೋಡಿ ಸಡಗರಪಟ್ಟುಕೊಂಡು ಸ್ವಾಗತಿಸಿದನು ಮತ್ತು, ಸತ್ಕಾರ ನೀಡಿದ ನಂತರ ಹೀಗೆ ವಿನಂತಿಸಿಕೊಂಡನು-

''ಭಗವನ್, ತಮ್ಮನ್ನು ಬಹುವಾಗಿ ಹುಡುಕಿಸಿದೆ. ತಾವು ಸಿಗಲಿಲ್ಲ. ನನ್ನ ಪುಣ್ಯ ತಾವೀಗ ಆಗಮಿಸಿದ್ದೀರಿ. ನನ್ನ ಈ ಯಜ್ಞಕ್ಕೆ ಸಕಲ ಮಾರ್ಗದರ್ಶನವೂ ತಮ್ಮಿಂದಲೇ ಆಗಬೇಕು.''

ಉಷಸ್ತಿಗೆ ತನ್ನ ಪಾಡು ಮರೆತಿರಲಿಲ್ಲ. ರಾಜನ ವಿನಯಕ್ಕೆ ಸೋಲದೆ ''ನನಗೆ ಪುಷ್ಕಳವಾಗಿ ದಾನಮಾಡಬೇಕು. ಉಳಿದವರಿಗೆ ಎಷ್ಟನ್ನು ದಾನವಾಗಿ ಕೊಡುವೆಯೋ ಅಷ್ಟು ಪ್ರಮಾಣವನ್ನು ನನಗೊಬ್ಬನಿಗೇ ನೀಡಬೇಕು''- ಎಂದು ತಿಳಿಸಿದನು.

ಇಷ್ಟವಾದ ಆ ಯಜ್ಞವು ಸಾಂಗವಾಗಿ ನೆರವೇರುವುದು ರಾಜನಿಗೆ ಮುಖ್ಯವಾಗಿತ್ತು. ಹಾಗಾಗಿ ತಕ್ಷಣ ಒಪ್ಪಿಕೊಂಡನು. ಯಜ್ಞಕ್ಕಾಗಿ ನಡೆಸಿದ ಸಿದ್ಧತೆಗಳನ್ನು ಉಷಸ್ತಿಯು ಪರಿಶೀಲಿಸಿದನು. ಅದು ಅವನಿಗೆ ತೃಪ್ತಿ ನೀಡಿತು. ಅನಂತರ ಪ್ರಸ್ತೋತ್ರನನ್ನು ಕರೆಸಿದನು.

''ನೀನು ಪ್ರಸ್ತೋತೃ. ಯಜ್ಞದಲ್ಲಿ ಪ್ರಸ್ತಾವವನ್ನು ಹಾಡಬೇಕಾದವನು. ಪ್ರಸ್ತಾವದ ದೇವತೆ ಪ್ರಾಣ. ಪ್ರಾಣ ಎಂದರೆ ಪರಮಾತ್ಮ. ಎಲ್ಲ ಜೀವಿಗಳೂ ಹುಟ್ಟುವಾಗ ಪ್ರಾಣದಿಂದ ಹೊರಗೆ ಬರುತ್ತವೆ. ಸಾಯುವಾಗ ಪ್ರಾಣದೊಳಗೆ ಲೀನವಾಗುತ್ತವೆ. ಇದನ್ನು ಅರಿಯದೆ ಅರಿತಿದ್ದನ್ನು ಚಿತ್ತದಲ್ಲಿ ಇಟ್ಟುಕೊಳ್ಳದೆ ಪ್ರಸ್ತಾವವನ್ನು ಹಾಡಬೇಡ.''

ಉಷಸ್ತಿಯು ಉದ್ಗಾತ್ರವನ್ನೂ ಕರೆಸಿದನು. ಕೆಲವು ಪ್ರಶ್ನೆಗಳನ್ನು ಹಾಕಿ ಅವನನ್ನು ಅರಿತುಕೊಂಡ ಮೇಲೆ ಹೀಗೆ ಹೇಳಿದನು – ''ನೀನು ಉದ್ಗಾತೃ. ಈ ಯಜ್ಞದಲ್ಲಿ ಉದ್ಗೀಥವನ್ನು ಹಾಡಬೇಕಾದವನು. ಉದ್ಗೀಥ ಓಂಕಾರ. ಉದ್ಗೀಥ ಸಾಮದ ಬಹುಮುಖ್ಯವಾದ ಭಾಗ. ಇಲ್ಲಿ ಎಚ್ಚರದಿಂದ ಇರಬೇಕು. ಆದಿತ್ಯನು ಉದ್ಗೀಥದ ದೇವತೆ. ಆದಿತ್ಯನನ್ನು ಕಂಡು ಸ್ತುತಿಸದ ಮನುಷ್ಯನೇ

ಇಲ್ಲ. ಇದನ್ನೆಲ್ಲ ಅರಿತು ಮನನಮಾಡಿ, ಅರಿತು ಮನನ ಮಾಡಿದ್ದನ್ನು ಚಿತ್ತದಲ್ಲಿ ಇರಿಸಿಕೊಂಡು ಉದ್ಗೀಥವನ್ನು ಹಾಡು.''

ಉಷಸ್ತಿಯು ಆಮೇಲೆ ಪ್ರತಿಹರ್ತನನ್ನು ಕರೆಸಿದನು. ಪ್ರತಿಹರ್ತನು ಸಾಮಮಂತ್ರಗಳನ್ನು ಹಾಡುವಾಗ ಸೇರಿಕೊಳ್ಳಬೇಕಾದವನು. ಯಜ್ಞದಲ್ಲಿ ಅವನು ಹಾಡಬೇಕಾದ ಮಂತ್ರಗಳ ಬಗೆಗೆ ಕೆಲವು ಪ್ರಶ್ನೆಗಳನ್ನು ಹಾಕಿ ವಿವರಗಳನ್ನು ಪಡೆದು ನಂತರ ಉಷಸ್ತಿಯು ಹೇಳಿದನು-

''ಸಾಮಮಂತ್ರಗಳನ್ನು ಹೇಳುವಾಗ ಎಲ್ಲಿ ಸೇರಿಕೊಳ್ಳಬೇಕು ಎನ್ನುವುದು ನಿನಗೆ ತಿಳಿದಿದೆ. ಪ್ರತಿಹಾರ ಎಂದರೆ ಸಾಕ್ಷಾತ್ ಅನ್ನ. ಅನ್ನವೇ ಪ್ರತಿಹಾರದ ದೇವತೆ. ಈ ಲೋಕವನ್ನು ಗಮನಿಸು. ಇಲ್ಲಿ ಜೀವಿಗಳು ಅನ್ನದಿಂದಲೆ ಬದುಕಬೇಕಾಗಿದೆ. ಇದಿಷ್ಟು ನಿನ್ನ ಧ್ಯಾನದಲ್ಲಿರಬೇಕು. ಇದಿಷ್ಟು ನಿನ್ನ ಮನನವಾಗಬೇಕು. ಇದಿಷ್ಟು ನಿನ್ನ ಚಿತ್ತದಲ್ಲಿ ನೆಲೆಸಿರಬೇಕು. ಇದಿಲ್ಲದೆ ನಿನ್ನ ಕರ್ತವ್ಯದಲ್ಲಿ ಚ್ಯುತಿ ಉಂಟಾಗುತ್ತದೆ.

ಉಷಸ್ತಿಯು ಮೊದಲು ಈ ಎಚ್ಚರಿಕೆಗಳನ್ನು ಮತ್ತು ಉಪದೇಶವನ್ನು ನೀಡಿದನು. ತನ್ನ ಮುಖ್ಯ ಸಹಾಯಕರನ್ನು ತಿದ್ದಿದನು. ಪ್ರಸ್ತಾವ ಉದ್ಗೀಥ ಪ್ರತಿಹಾರಗಳ ಆತ್ಮವನ್ನು ತೋರಿಸಿಕೊಟ್ಟನು. ನಂತರ ಯಜ್ಞದ ತಾತ್ವಿಕ ಚಿಂತನೆ ನಡೆಸಿದನು. ಯಜ್ಞವೂ ಒಂದು ಉಪಾಸನೆ. ಇಹದಲ್ಲಿ ನಡೆಯಲೇಬೇಕಾದ ಉಪಾಸನೆ. ಯಜ್ಞವನ್ನು ಮಾಡಬೇಕಾದುದು ಪ್ರಾಣಕ್ಕಾಗಿ ಆದಿತ್ಯನಿಗಾಗಿ ಅನ್ನಕ್ಕಾಗಿ. ಯಜ್ಞವನ್ನು ಮಾಡಬೇಕಾದುದು ಪ್ರಾಣದ ಸಾಧನೆಗೆ, ಆದಿತ್ಯದ ಪ್ರಸನ್ನತೆಗೆ, ಅನ್ನದ ಪ್ರಾಪ್ತಿಗೆ.

* * *

## – ಹನ್ನೊಂದು –

# ಗ್ಲಾವನ ಜ್ಞಾನೋದಯ

ಮಿತ್ರೆಯ ಮಗನಾದ ಗ್ಲಾವನು ಸ್ವಾಧ್ಯಾಯಕ್ಕಾಗಿ ಹೊರಟಿದ್ದನು. ಅವನಿಗೆ ದಾರಿಯಲ್ಲಿ ಒಂದು ಬಿಳಿಯ ನಾಯಿಯು ಎದುರಾಯಿತು. ಅದು ಕಾಣಿಸಿಕೊಂಡ ಸ್ವಲ್ಪ ಹೊತ್ತಿನಲ್ಲಿ ಬೇರೆ ನಾಯಿಗಳೂ ಕಾಣಿಸಿಕೊಂಡವು. ಅವು ಮೊದಲು ಕಾಣಿಸಿಕೊಂಡ ನಾಯಿಯನ್ನು ಕೂಡಿಕೊಂಡವು. ಆ ನಾಯಿಗಳಿಂದ ಬಿಳಿಯ ನಾಯಿಗೆ ಗೌರವ ಸಂದಾಯವಾಯಿತು. ಅನಂತರ ಅವು ''ಪೂಜ್ಯನೇ, ನಮಗೆ ತುಂಬ ಹಸಿವಾಗಿದೆ. ಸ್ತುತಿಸು, ನಮಗಾಗಿ ಸ್ತುತಿಸು,

ನಮಗೆ ಅನ್ನವನ್ನು ಕೊಡಿಸು'' ಎಂದು ಅಂಗಲಾಚಿದವು.

ಬಿಳಿಯ ನಾಯಿ ಯೋಚಿಸತೊಡಗಿತು. ಇದು ಸ್ತುತಿಸಲು ತಕ್ಕ ಸಮಯ ವಲ್ಲ. ಹಸಿದಾಗ ಮಾತ್ರ ಸ್ತುತಿ ಎಂದೂ ಸಲ್ಲದು. ಹೀಗೆ ಯೋಚಿಸಿ ನಾಯಿಗಳಿಗೆ ಮಾರನೆಯ ದಿನ ಪ್ರಾತಃಕಾಲದಲ್ಲಿ ಅದೇ ಸ್ಥಳಕ್ಕೆ ಬರುವಂತೆ ಸೂಚಿಸಿತು.

ಗ್ಲಾವನು ಇದನ್ನೆಲ್ಲ ನೋಡುತ್ತ ನಿಂತಿದ್ದನು. ಅವನಿಗೆ ಆಶ್ಚರ್ಯ ವಾಯಿತು. ಪ್ರಾತಃಕಾಲವನ್ನು ಎದುರು ನೋಡುತ್ತ ರಾತ್ರಿಯನ್ನು ಅಲ್ಲಿಯೇ ಕಳೆದನು. ಬಾನಲ್ಲಿ ಬೆಳ್ಳಿ ಮೂಡಿ ಕತ್ತಲೆಯು ಕರಗತೊಡಗಿದಂತೆಯೇ ನಾಯಿಗಳು ಅಲ್ಲಿಗೆ ಬರತೊಡಗಿದವು. ಬಿಳಿಯ ನಾಯಿಯ ಸೂಚನೆ ದೊರೆತ ಕೂಡಲೆ ಉಳಿದ ನಾಯಿಗಳು ಒಂದರ ಬಾಲವನ್ನು ಮತ್ತೊಂದು ಕಚ್ಚಿಕೊಂಡವು. ಹೀಗೆ ಕಚ್ಚಿಹಿಡಿದ ಮೇಲೆ ಉದ್ಗಾತೃರು ಯಜ್ಞದಲ್ಲಿ ಒಬ್ಬರನ್ನೊಬ್ಬರು ಹಿಡಿದುಕೊಂಡು ನಡೆಯುವ ರೀತಿಯಲ್ಲಿ ಅವು ನಡೆಯತೊಡಗಿದವು, ಅನಂತರ ಉದ್ಗಾತ್ರರಂತೆ ಕುಳಿತವು; ಉದ್ಗಾತ್ರರು ಮಾಡುವಂತೆ ಹಿಂಕಾರ ಮಾಡಿದವು.

ಹಸಿದಿದ್ದರೂ ನಾಯಿಗಳು ತಾಳ್ಮೆಗೆಟ್ಟಿರಲಿಲ್ಲ. ನಿಯಮವನ್ನು ಮೀರಿರ ಲಿಲ್ಲ. ಅದೇ ಸ್ಥಿತಿಯಲ್ಲಿ ಕುಳಿತು ಹಾಡಲು ತೊಡಗಿದವು. ''ಓಮದಾಮೋಂ ಪಿಬಾಮೋಂ'' – ''ನಾವು ತಿನ್ನೋಣ ನಾವು ಕುಡಿಯೋಣ'' – ಎಂದು ಆಶಿಸುತ್ತ ಓಂಕಾರಪೂರ್ವಕವಾಗಿ, ಹಸಿದು ಕುಳಿತು ಪ್ರಾಣವನ್ನು ಓಲೈಸಿದವು. ಆದಿತ್ಯನನ್ನು ಕಂಗಳಲ್ಲಿ ತುಂಬಿಕೊಳ್ಳುತ್ತ ಸ್ತುತಿಸಿದವು. ಅನ್ನಕ್ಕಾಗಿ ಕಾಯುತ್ತ ಒಬ್ಬರನ್ನೊಬ್ಬರು ಅನುಸರಿಸುತ್ತ ಕುಳಿತು ಉಪಾಸನೆ ಮಾಡಿದವು. *(ಛಾಂದೋಗ್ಯ, ಅಧ್ಯಾಯ 1, ಖಂಡ 12.)*

ಗ್ಲಾವನು ಇದೆಲ್ಲವನ್ನು ನೋಡುತ್ತ ನಿಂತಿದ್ದನು. ನಾಯಿಗಳ ಪರಸ್ಪರ ಹಾರೈಕೆ ಅನ್ನಬ್ರಹ್ಮದ ಉಪಾಸನೆ ಇವೆಲ್ಲ ಗ್ಲಾವನ ಕಣ್ತೆರೆಸಿದವು. ಮಂತ್ರಗಳನ್ನು ಕೂಡಿ ಹಾಡಬೇಕು. ಫಲಗಳನ್ನು ಕೂಡಿ ಪಡೆಯಬೇಕು. ಅನ್ನವನ್ನು ಕೂಡಿ ಭುಂಜಿಸಬೇಕು. ''ನಾನೊಬ್ಬನೆ ಸ್ವಾಧ್ಯಾಯಕ್ಕಾಗಿ ದೂರ ಹೊರಟಿದ್ದೆನಲ್ಲ!'' ಎಂದು ಯೋಚಿಸಿದನು. ಹೀಗೆ ಉಪಾಸನೆ ಮಾಡಿದವನ ವಾಕ್ಕು ಫಲ ನೀಡುತ್ತದೆ. ಅವನು ಅನ್ನವಂತನಾಗುತ್ತಾನೆ ಮತ್ತು ಅವನು ಎಲ್ಲರೊಂದಿಗೆ ಅನ್ನವಂತನಾಗುತ್ತಾನೆ – ಎಂದು ಗ್ಲಾವನು ಅರಿತನು. *(ಛಾಂದೋಗ್ಯ, ಅಧ್ಯಾಯ 1, ಖಂಡ 13.)*

* * *

ಛಾಂದೋಗ್ಯವು ಭೇದದೃಷ್ಟಿಯನ್ನು ನಿರಾಕರಿಸಿ ಅಭೇದವನ್ನು ಸಮರ್ಥಿಸುತ್ತದೆ ಎಂದು ಛಾಂದೋಗ್ಯೋಪನಿಷತ್ತನ್ನು ಪ್ರಸ್ತಾಪಿಸುತ್ತ ಹೇಳಿದ ನನ್ನ ಈ ಮಾತನ್ನು ಮತ್ತೊಮ್ಮೆ ನೆನಪಿಸಿಕೊಳ್ಳುತ್ತೇನೆ. ''ತತ್ತ್ವಮಸಿ'' – ನೀನು ಅದೇ ಆಗಿರುವೆ – ಎನ್ನುವ ಬೋಧವಾಗಲೀ ರೈಕ್ವನ ಹಾಗೂ ರಾಜಾ ಜಾನಶ್ರುತಿಯ ನಡುವಿನ ಮಾತುಕತೆಯಾಗಲೀ ಅಥವಾ ಇಲ್ಲಿಯ ಇನ್ನಾವುದೇ ಉಪಾಖ್ಯಾನವಾಗಲೀ ಸಮಗ್ರದೃಷ್ಟಿಯ ಭಾವನೆಗೆ ಒತ್ತು ಕೊಡುತ್ತವೆ. ಹೀಗೆ ಸೃಷ್ಟಿಯಲ್ಲಿರುವ ಅಖಂಡತೆಯನ್ನು ಅನಾವರಣಗೊಳಿಸಿ ತೋರಿಸುವ ಛಾಂದೋಗ್ಯದ ಉಪಾಖ್ಯಾನಗಳಲ್ಲಿ ಪ್ರಾಣವನ್ನೆ ಅವಲಂಬಿಸುವ ಹಾಗೂ ಗ್ಲಾವನು ಅರಿತುಕೊಂಡಂತೆ ಸರ್ವೋದಯವನ್ನು ಮನಗಾಣಿಸುವ ಜೀವನ ದೃಷ್ಟಿ ಅಡಕವಾಗಿದೆ. ಈ ಎಲ್ಲ ಉಪಾಖ್ಯಾನಗಳೂ ನಮ್ಮ ಬದುಕನ್ನು ನಡೆಸುವ ದೈನಂದಿನ ಭಾವನೆಗಳಿಗೆ ಒಂದು ವಿಶಿಷ್ಟತೆಯನ್ನು ತರುತ್ತವೆ. ಇದನ್ನೇ ಬದುಕುವುದು ಸಾಧ್ಯವಾದರೆ ಇದೇ ದರ್ಶನ.



# ನವಕರ್ನಾಟಕ ಪ್ರಕಾಶನದ ಪ್ರಕಟಣೆಗಳು

## ಕಥಾ ಸಾಹಿತ್ಯ : ಕಥೆ – ಕಾದಂಬರಿ – ಕವನ – ನಾಟಕ

| | | |
|---|---|---|
| **ಉರಿದ ಬದುಕು** (ಕಥಾ ಸಂಕಲನ) | *ಶಾಂತರಸ* | **60.00** |
| **ಕುಟ್ಯಕ್ಕ ಮತ್ತು ಇತರ ಕಥೆಗಳು** (ಕಥಾ ಸಂಕಲನ) | *ಮಲಯಾಳ ಮೂಲ : ಎಂ. ಟಿ. ವಾಸುದೇವನ್ ನಾಯರ್ (ಅನು : ಕೆ. ಕೆ. ನಾಯರ್)* | **65.00** |
| **ಗೋದಿಯ ತೆನೆಗಳು** (ಕವನ ಸಂಕಲನ) | *ಸು. ರಂ. ಎಕ್ಕುಂಡಿ* | **28.00** |
| **ಹೊಕ್ಕಳಲ್ಲಿ ಹೂವಿದೆ** (ಕವನ ಸಂಕಲನ) (2ನೇ ಮುದ್ರಣ) *(ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ – 1996)* | *ರಂಜಾನ್ ದರ್ಗಾ* | **25.00** |
| **ದ್ರೌಪದಿ** (ಕಾದಂಬರಿ) | *ಡಾ|| ಎಸ್. ವಿ. ಪ್ರಭಾವತಿ* | **35.00** |
| **ಮಹಾಚೈತ್ರ** (ನಾಟಕ) (7ನೇ ಮುದ್ರಣ) | *ಡಾ|| ಎಚ್. ಎಸ್. ಶಿವಪ್ರಕಾಶ್* | **28.00** |
| **ಈಶ್ವರ ಅಲ್ಲಾ** (ಕಿರು ಕಾದಂಬರಿ) (2ನೇ ಮುದ್ರಣ) | *ಜಿ. ಕೆ. ಗೋವಿಂದರಾವ್* | **20.00** |
| **ತ್ರಿಕಾಲ** (ಕಥಾ ಸಂಕಲನ) | *ವ್ಯಾಸರಾಯ ಬಲ್ಲಾಳ* | **28.00** |
| **ಚಿದಂಬರಂ** (ಕಥಾ ಸಂಕಲನ) | *ಸಿ. ವಿ. ಶ್ರೀರಾಮನ್ (ಅನು. ಡಾ|| ಅಶೋಕ್ ಕುಮಾರ್)* | **25.00** |
| **ಅರುಂಧತಿ, ನನ್ನ ಮಗಳು** (ಕಾದಂಬರಿ) | *ಹಿರೇಮಲ್ಲೂರ ಈಶ್ವರನ್* | **55.00** |
| **ಅಸ್ಪೃಶ್ಯರು** (ಕಾದಂಬರಿ) *(ಶಿವಮೊಗ್ಗ ಕರ್ನಾಟಕ ಸಂಘದ ಎಂ. ಕೆ. ಇಂದಿರಾ ಪ್ರಶಸ್ತಿ - 1994)* | *ವೈದೇಹಿ* | **25.00** |
| **ಜೆಹಾದ್** (ಕಾದಂಬರಿ) (2ನೇ ಮುದ್ರಣ) | *ಬೊಳುವಾರು ಮಹಮದ್ ಕುಂಞ* | **40.00** |
| **ಸರಕುಗಳು** (ಕಾದಂಬರಿ) | *ಫಕೀರ್ ಮುಹಮ್ಮದ್ ಕಟ್ಪಾಡಿ* | **15.00** |
| **ಮೌನಕ್ರಾಂತಿ** (ಕಾದಂಬರಿ) | *ದು. ನಿಂ. ಬೆಳಗಲಿ* | **28.00** |
| **ಅದೀನಾ** (ಕಾದಂಬರಿ) | *ಸದರುದ್ದೀನ್ ವಿನಿ (ಅನು : ಎಂ. ದಸ್ತಗೀರ್)* | **9.00** |
| **ವ್ಯಾಳಿ** (ಕಾದಂಬರಿ) | *ಜಿ. ಕೆ. ಬಾಲಚಂದ್ರನ್ (ಅನು : ಕೆ. ಕೆ. ನಾಯರ್)* | **28.00** |
| **ಶತಮಾನಗಳ ಬಾಯಾರಿಕೆ** (ಕವನ ಸಂಕಲನ) *(ಯುದ್ಧದ ವಿರುದ್ಧ ಶಾಂತಿಯ ದನಿ)* | *ಸಂ. ಚಿ. ಶ್ರೀನಿವಾಸರಾಜು, ರಂಜಾನ್ ದರ್ಗಾ, ರಘುನಂದನ* | **8.00** |
| **ನೀಲಿಕಂದರ** (ವೈಜ್ಞಾನಿಕ ಕಾಲ್ಪನಿಕ ಕಾದಂಬರಿ) | *ಡಾ|| ವಿರೂಪಾಕ್ಷ ಕೆ. ಬಣಕಾರ* | **25.00** |
| **ಬಸಂತಿ** (ಕಾದಂಬರಿ) | *ಭೀಷ್ಮ ಸಾಹನಿ (ಅನು : ಶ್ರೀಮತಿ ಶಾರದಾ ರಾಮಚಂದ್ರಸ್ವಾಮಿ ಮತ್ತು ಡಾ|| ರಾಮಚಂದ್ರಸ್ವಾಮಿ)* | **20.00** |

| | | |
|---|---|---|
| ಗವಾಕ್ಷಿ (ಕಾದಂಬರಿ) | *ಭೀಷ್ಮ ಸಾಹನಿ (ಅನು : ಶ್ರೀಮತಿ ಶಾರದಾ ರಾಮಚಂದ್ರಸ್ವಾಮಿ ಮತ್ತು ಡಾ॥ ರಾಮಚಂದ್ರಸ್ವಾಮಿ)* | 20.00 |
| ಹಾನೂಶ್ (ನಾಟಕ) | *ಭೀಷ್ಮ ಸಾಹನಿ (ಅನು. ದಾಕ್ಷಾಯಣಿ ಸೋಮಶೇಖರ್)* | 25.00 |
| ಪರಿಹಾರ (ನಾಟಕ) | *ಭೀಷ್ಮ ಸಾಹನಿ (ಅನು : ಅಶ್ವಿನಿ ರಂಗಾ)* | 50.00 |
| ವೋಲ್ಗಾ - ಗಂಗಾ (ಕಾದಂಬರಿ) (4ನೇ ಮುದ್ರಣ) | *ರಾಹುಲ ಸಾಂಕೃತ್ಯಾಯನ (ಅನು · ಬಿ ಎಂ ಶರ್ಮಾ)* | 65.00 |
| ಸಿಂಹ ಸೇನಾಪತಿ (ಕಾದಂಬರಿ) | *ರಾಹುಲ ಸಾಂಕೃತ್ಯಾಯನ (ಅನು : ಬಿ ಎಂ. ಶರ್ಮಾ)* | 25.00 |
| ಜಯ ಯೌಧೇಯ (ಕಾದಂಬರಿ) *(ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಉತ್ತಮ ಅನುವಾದಕ್ಕಾಗಿ ಪುರಸ್ಕಾರ-1994)* | *ರಾಹುಲ ಸಾಂಕೃತ್ಯಾಯನ (ಅನು. ಡಾ॥ ಪ್ರಧಾನ್ ಗುರುದತ್ತ)* | 70.00 |
| ದಿವೋದಾಸ (ಕಾದಂಬರಿ) | *ರಾಹುಲ ಸಾಂಕೃತ್ಯಾಯನ (ಅನು : ಡಾ॥ ಪ್ರಧಾನ್ ಗುರುದತ್ತ)* | 30.00 |
| ಕುಣಿಯೇ ಘುಮಾ (ಆತ್ಮಕಥೆ) | *ಮರಾಠಿ ಮೂಲ : ಮಾಧವಿ ದೇಸಾಯಿ (ಅನು · ಚಂದ್ರಕಾಂತ ಪೋಕಳೆ)* | 55.00 |
| ಗಬಾಳ (ಆತ್ಮಕಥೆ) | *ದಾದಾಸಾಹೇಬ ಮಲ್ಹಾರಿ ಮೋರೆ (ಅನು. ದು. ನಿಂ ಬೆಳಗಲಿ)* | 45.00 |
| ಮನೋರೋಗ ಗೆಲ್ಲಬಹುದೆ ? (ಮನೋರೋಗಿಯ ಆತ್ಮಕಥೆ) | *ಸ್ನೇಹಾ* | 75.00 |
| ಹೃದಯದಿಂದ ಹೃದಯಕ್ಕೆ (ಪ್ರವಾಸ ಕಥನ) (3ನೇ ಮುದ್ರಣ) | *ಎಸ್. ಆರ್. ಗೌತಮ್* | 40.00 |
| ಕೃಷಿ ಗಾದೆಗಳು | *ಡಾ॥ ಎಂ. ಎ. ನಾರಾಯಣರೆಡ್ಡಿ, ಡಾ॥ ಪಿ. ನಾರಾಯಣ ಸ್ವಾಮಿ* | 30.00 |
| ನಗೆಮುಗಿಲು (ನಗೆಹನಿಗಳು) | *ಎಸ್ ಎನ್. ಶಿವಸ್ವಾಮಿ* | 10.00 |
| ನಗೆಮಿಂಚು (ನಗೆಹನಿಗಳು) | *ಎಸ್. ಎನ್. ಶಿವಸ್ವಾಮಿ* | 10.00 |
| ನಗೆಗೊಂಚಲು (ನಗೆಹನಿಗಳು) | *ಎಸ್. ಎನ್ ಶಿವಸ್ವಾಮಿ* | 10.00 |
| ನನ್ನ ಮೆಚ್ಚಿನ ಜೋಕುಗಳು (ನಗೆಹನಿಗಳು) | *ಉದಯ್ ಜಾದೂಗಾರ್* | 12.00 |
| ಟಾನಿಕ್ ಬೇಕೆ ಟಾನಿಕ್ (ನಗೆಹನಿಗಳು) (2ನೇ ಮುದ್ರಣ) | *ಪ್ರಿಯತಮ* | 8.00 |
| ಕಂಡಲ್ಲಿ ಗುಂಡು (ನಗೆಬರಹಗಳು) | *ಅನಂತ ಕಲ್ಲೋಳ* | 18.00 |
| ಸಂಚು : ಕನ್ನಡ – 001 (ನಗೆನಾಟಕ) | *ಅನಂತ ಕಲ್ಲೋಳ* | 22.00 |
| ಸಿನಿಮಹಾತ್ಮೆ (ನಗೆನಾಟಕ) | *ಎಚ್ ಡುಂಡಿರಾಜ್* | 20.00 |
| ಜಂಟಲ್‌ಮನ್ಸ್ ಕಾಲರ್ (ನಗೆಬರಹಗಳು) | *ಕೆ. ಚಂದ್ರಮೌಳಿ* | 22.00 |
| ಐರಾವತದ ಕಥೆಗಳು (ನಗೆಬರಹಗಳು) | *ಕೆ. ಚಂದ್ರಮೌಳಿ* | 48.00 |
| ಪಂಚ್-ಕ-ಜಾಯ್ (ಮಿನಿ ಕವಿತೆಗಳು) | *ಎಚ್ ದುಂಡಿರಾಜ್* | 22.00 |
| ಆಸ್ಪತ್ರೆಯಲ್ಲಿ ಹಾಸ್ಯ (ಜೋಕುಗಳು) | *ಡಾ॥ ಲೀಲಾವತಿ ದೇವದಾಸ್* | 10.00 |

# ನವಕರ್ನಾಟಕ ಪ್ರಕಾಶನದ ಪ್ರಕಟಣೆಗಳು

## ಇತಿಹಾಸ

| | | |
|---|---|---|
| **ಕರ್ನಾಟಕ ಏಕೀಕರಣ ಇತಿಹಾಸ** | *ಡಾ|| ಎಚ್. ಎಸ್ ಗೋಪಾಲ ರಾವ್* | **160.00** |
| | (ಉತ್ತಮ ಪ್ರತಿ) | **200.00** |
| **ನಮ್ಮ ನಾಡು ಕರ್ನಾಟಕ (3ನೇ ಮುದ್ರಣ)** | *ಡಾ|| ಎಚ್. ಎಸ್. ಗೋಪಾಲ ರಾವ್* | **55.00** |
| **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು (2ನೇ ಮುದ್ರಣ)** | *ಎನ್ ಪಿ ಶಂಕರನಾರಾಯಣ ರಾವ್* | |
| (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ) | | **110.00** |
| (ಕ. ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ 1991) | (ಉತ್ತಮ ಪ್ರತಿ) | **150.00** |
| **ಸ್ವಾತಂತ್ರ್ಯದ ಗುರಿ ಭಾರತದ ದಾರಿ (2ನೇ ಮುದ್ರಣ)** | *ಎನ್. ಪಿ. ಶಂಕರನಾರಾಯಣ ರಾವ್* | **35.00** |
| **ಸ್ವಾತಂತ್ರ್ಯ ಹೋರಾಟದಲ್ಲಿ ಭಾರತೀಯ ಮುಸ್ಲಿಮರ ಪಾತ್ರ** | *ಶಾಂತಿಮೈ ರಾಯ್* | |
| (2ನೇ ಮುದ್ರಣ) | *(ಅನು : ಪ್ರಕಾಶ್ ಹಿಟ್ನಹಳ್ಳಿ)* | **10.00** |
| **ಕೋಮುವಾದ ಮತ್ತು ಭಾರತೀಯ ಇತಿಹಾಸ ಲೇಖನ** | *ರೊಮಿಲಾ ಥಾಪರ್, ಹರ್ಬನ್ಸ್ ಮುಖಿಯಾ, ಬಿಪಿನ್ ಚಂದ್ರ* | |
| | *(ಅನು : ಕೆ. ಎಲ್. ಗೋಪಾಲಕೃಷ್ಣ ರಾವ್)* | **20.00** |
| **ಆರ್ಯರಿಗಾಗಿ ಹುಡುಕಾಟ** | *ಪ್ರೊ|| ಆರ್. ಎಸ್ ಶರ್ಮ* | |
| | *(ಅನು : ಡಾ|| ಎಸ್. ಗುರುದತ್)* | **25.00** |
| **ಪ್ರಾಚೀನ ಭಾರತ** | *ಪ್ರೊ|| ಆರ್ ಎಸ್. ಶರ್ಮ* | |
| | *(ಅನು · ಎನ್. ಪಿ ಶಂಕರನಾರಾಯಣ ರಾವ್)* | **95.00** |
| **ಪ್ರಾಚೀನ ಭಾರತದಲ್ಲಿ ಜನಜೀವನ (3ನೇ ಮುದ್ರಣ)** | *ಎಸ್ ಆರ್ ಭಟ್* | **12.00** |
| **ಕಯ್ಯೂರಿನ ರೈತವೀರರು** | *ಫಕೀರ್ ಮುಹಮ್ಮದ್ ಕಟ್ಪಾಡಿ* | **22.00** |
| **ಜಗತ್ತನ್ನು ತಲ್ಲಣಗೊಳಿಸಿದ ಹತ್ತು ದಿನಗಳು** | *ಜಾನ್ ರೀಡ್* | |
| | *(ಅನು . ಎಚ್. ಎಸ್ ಹರಿಶಂಕರ್)* | **30.00** |
| **ಸೋವಿಯತ್ ರಶಿಯಾದಲ್ಲಿ ಭಾರತದ ಕ್ರಾಂತಿಕಾರಿಗಳು** | *ಎಂ ಎ. ಪೆರ್ಸಿತ್ಸ್* | |
| | *(ಅನು : ಸೂರ್ಯಕಾಂತ ಸೊನ್ನದ)* | **40.00** |
| **ಸ್ನೇಹ ಸೇತು (ಭಾರತ ರಷ್ಯಾ ಸಂಬಂಧಗಳ ರೋಚಕ ಇತಿಹಾಸ)** | *ಆರ್. ಪೂರ್ಣಿಮಾ* | **8.00** |
| **1857ರ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮ** | *ಎಂ. ದಸ್ತಗೀರ್* | **55.00** |

# ನೀವು ಓದಲೇಬೇಕಾದ, ನವಕರ್ನಾಟಕ ಪ್ರಕಾಶನದ ಪ್ರಶಸ್ತಿ ಪಡೆದಿರುವ ಕೃತಿಗಳು

**ಕಲೆ ಮತ್ತು ಸಾಮಾಜಿಕ ಜೀವನ** *ಜಿ. ವಿ. ಪ್ಲೆಖನೋವ್ (ಅನು : ಎಚ್. ಕೆ. ರಾಮಚಂದ್ರಮೂರ್ತಿ)* 10.00
*(ಕನ್ನಡ ಸಾಹಿತ್ಯ ಪರಿಷತ್ತು ಉತ್ತಮ ಅನುವಾದಕ್ಕಾಗಿ 1979-80 ರಲ್ಲಿ ನೀಡಿರುವ ಪ್ರಶಸ್ತಿ )*

*** ಹೆಜ್ಜೆ ಗುರುತು (ವಿಶ್ವ ಕಥಾಕೋಶ) (ರಷಿಯನ್ ಕಥೆಗಳು).** *(ಅನು : ನಿಸಾರ್ ಅಹಮದ್)* 10.00
*(ಸೋವಿಯತ್ ಲ್ಯಾಂಡ್ ಉತ್ತಮ ಅನುವಾದ - 1981-82)*

**ಮಾರ್ಕ್ಸ್‌ವಾದಿ ವಿಚಾರಧಾರೆ : ಸಂಪುಟ- 1** *ಬಿ. ವಿ. ಕಕ್ಕಿಲ್ಲಾಯ* 30.00
(ಕಾರ್ಲ್ ಮಾರ್ಕ್ಸ್ ಬದುಕು ಬರಹ)
*(ಸೋವಿಯತ್ ಲ್ಯಾಂಡ್ ನೆಹರೂ ಪುರಸ್ಕಾರ - 1986-87)*

**ಮಾರ್ಕ್ಸ್‌ವಾದಿ ವಿಚಾರಧಾರೆ - ಸಂಪುಟ-2** *ಬಿ. ವಿ. ಕಕ್ಕಿಲ್ಲಾಯ* 25.00
ಫ್ರೆಡರಿಕ್ ಎಂಗೆಲ್ಸ್ (ಜೀವನ-ಚಿಂತನ)
*(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ - 1987)*

*** ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ** *ಸಿ. ವೀರಣ್ಣ* 55.00
*(ತೀ. ನಂ. ಶ್ರೀ. ಸ್ಮಾರಕ ಪುರಸ್ಕಾರ, ಮೈಸೂರು ವಿಶ್ವವಿದ್ಯಾಲಯ - 1986-87-88)*

*** ಸಾಹಿತ್ಯ ಸಿದ್ಧಾಂತ ಮತ್ತು ಹೋರಾಟ** *ಡಾ|| ಆರ್ಕೆ* 12.00
*(ಕನ್ನಡ ಸಾಹಿತ್ಯ ಪರಿಷತ್ತು ಡಾ|| ಎಚ್. ಎಸ್. ದತ್ತಿನಿಧಿ ಪ್ರಶಸ್ತಿ - 1986-87-88)*

**ಸಿನಿಮಾ ಮತ್ತು ಪ್ರೇಕ್ಷಕ** *ಅಬ್ದುಲ್ ರೆಹಮಾನ್ ಪಾಷ* 18.00
*(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ - 1988)*

*** ವಜ್ರಗಳು** *ಸಾರಾ ಅಬೂಬಕರ್* 16.00
*(ಕನ್ನಡ ಸಾಹಿತ್ಯ ಪರಿಷತ್ತು ಮಹಿಳೆಯರ ದತ್ತಿನಿಧಿ ಪ್ರಶಸ್ತಿ - 1988-89)*

*** ಪ್ರಾಚೀನ ಭಾರತದಲ್ಲಿ ಭೌತಿಕವಾದ** *ದೇವಿಪ್ರಸಾದ ಚಟ್ಟೋಪಾಧ್ಯಾಯ (ಅನು : ಬಿ. ವಿ. ಕಕ್ಕಿಲ್ಲಾಯ)* 18.00
*(ಕನ್ನಡ ಸಾಹಿತ್ಯ ಪರಿಷತ್ತು ಸೃಜನೇತರ ಕೃತಿ 1989 ಅನುವಾದಕರಿಗೆ ಪ್ರಶಸ್ತಿ)*

**ಸಂಪ್ರದಾಯ ವಿಜ್ಞಾನ ಮತ್ತು ಸಮಾಜ (3ನೇ ಮುದ್ರಣ)** *ಡಾ|| ಎಸ್. ಬಾಲಚಂದ್ರರಾವ್* 25.00
*(ಕನ್ನಡ ಸಾಹಿತ್ಯ-ಪರಿಷತ್ತು ಡಾ|| ಎಚ್. ಎಸ್. ದತ್ತಿನಿಧಿ ಪ್ರಶಸ್ತಿ - 1989)*

*** ಸಾಹಿತ್ಯ ಮತ್ತು ಮಹಿಳೆ** *ವಿಜಯಶ್ರೀ ಸಬರದ* 10.00
*(ಕನ್ನಡ ಸಾಹಿತ್ಯ ಪರಿಷತ್ತು ಗೋವಿಂದರಾವ್ ಪ್ರಶಸ್ತಿ - 1988-89)*

**ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು** *ಎಸ್. ಪಿ. ಶಂಕರನಾರಾಯಣ ರಾವ್* ಸಾದಾ : 110.00
*(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ - 1991)* ಉತ್ತಮ : 150.00

**ವಿಶ್ವವಿಖ್ಯಾತ ಸಂಶೋಧಕರು ಮತ್ತು ಸಾಧನೆಗಳು (3ನೇ ಮುದ್ರಣ)** *ಸೂರ್ಯಕಾಂತ* 28.00
*(ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ - 1993)*

* ಅಕ್ರಮ ಸಂತಾನ — ಶರಣ ಕುಮಾರ ಲಿಂಬಾಳೆ (ಅನು : ದು. ನಿಂ. ಬೆಳಗಲಿ) — 25.00

*(ಅನುವಾದಕ್ಕಾಗಿ ಉಮಾಪತಿ ಚುಕ್ಕಿ ಪ್ರತಿಷ್ಠಾನದ ಪ್ರಶಸ್ತಿ - 1992)*

* ಆರೋಗ್ಯದ ಅರಿವು — ಡಾ// ಪಿ. ಎಸ್. ಶಂಕರ್ — 10.00

*(ಗ್ವಾಲಿಯರ್‌ನ ಲಕ್ಷ್ಮೀಬಾಯ್ ಶಾರೀರಿಕ ಶಿಕ್ಷಣದ ರಾಷ್ಟ್ರೀಯ ಮಹಾವಿದ್ಯಾಲಯದ 17ನೇ ರಾಷ್ಟ್ರೀಯ ಬಹುಮಾನ ಸ್ಪರ್ಧೆಯಲ್ಲಿ ನವಚೈತನ್ಯದ ಆರೋಗ್ಯ ಶಿಕ್ಷಣ ಬಹುಮಾನ)*

ವೈಜ್ಞಾನಿಕ ಮನೋಧರ್ಮ (4ನೇ ಮುದ್ರಣ) — ಜಿ. ಟಿ. ನಾರಾಯಣರಾವ್ — 45.00

*(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ - 1990)*

*(ಕನ್ನಡ ಸಾಹಿತ್ಯ ಪರಿಷತ್ತು ಡಾ// ಎಚ್. ಎಸ್. ದತ್ತಿನಿಧಿ ಪ್ರಶಸ್ತಿ - 1992)*

ಮಹಿಳೆ ಬಿಡುಗಡೆಯ ಹಾದಿಯಲ್ಲಿ (3ನೇ ಮುದ್ರಣ) — ಎನ್. ಗಾಯತ್ರಿ — 55.00

*(ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಸಾವಿತ್ರಮ್ಮ ದತ್ತಿನಿಧಿ ಪ್ರಶಸ್ತಿ - 1992)*

ಮಾನಸಿಕ ಸಮಸ್ಯೆಗಳಿಗೆ ಮನಸ್ಸು ಇಲ್ಲದ ಮಾರ್ಗ (3ನೇ ಮುದ್ರಣ) — ಡಾ// ಮೀನಗುಂಡಿ ಸುಬ್ರಹ್ಮಣ್ಯಂ — 80.00

*(ವರ್ಧಮಾನ ಪ್ರಶಸ್ತಿ - 1993)*

ಪ್ರೀತಿಯ ಗುಟ್ಟು (3ನೇ ಮುದ್ರಣ) — ಪ. ರಾಮಕೃಷ್ಣ ಶಾಸ್ತ್ರಿ — 12.00

*(ಕನ್ನಡ ಸಾಹಿತ್ಯ ಪರಿಷತ್ತಿನ ಮಕ್ಕಳ ಪುಸ್ತಕ ಪ್ರಶಸ್ತಿ - 1992)*

*(ದಕ್ಷಿಣ ಕನ್ನಡ ಮಕ್ಕಳ ಸಾಹಿತ್ಯ ಸಂಗಮ ಪ್ರಶಸ್ತಿ - 1995)*

ಅಸ್ಪೃಶ್ಯರು (ಕಾದಂಬರಿ) — ವೈದೇಹಿ — 25.00

*(ಶಿವಮೊಗ್ಗ ಕರ್ನಾಟಕ ಸಂಘದ ಎಂ. ಕೆ. ಇಂದಿರಾ ಪ್ರಶಸ್ತಿ - 1994)*

ವೈದ್ಯಲೋಕದ ಕೌತುಕಗಳು (2ನೇ ಮುದ್ರಣ) — ಡಾ// ಎಚ್. ಡಿ. ಚಂದ್ರಪ್ಪಗೌಡ — 40.00

*(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ - 1993)*

ಜಯ ಯೌಧೇಯ — ರಾಹುಲ ಸಾಂಕೃತ್ಯಾಯನ (ಅನು : ಡಾ// ಪ್ರಧಾನ್ ಗುರುದತ್ತ) — 70.00

*(ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಉತ್ತಮ ಅನುವಾದಕ್ಕಾಗಿ ಪುರಸ್ಕಾರ - 1994)*

ಜಾದೂಪಕ್ಷಿ (2ನೇ ಮುದ್ರಣ) — ದು. ನಿಂ. ಬೆಳಗಲಿ — 10.00

*(ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ - 1994)*

ಗಿಡಮೂಲಿಕೆಗಳಿಂದ ಸೌಂದರ್ಯ ಸಾಧನಗಳು (3ನೇ ಮುದ್ರಣ) — ಡಾ// ಎಲ್. ವಸಂತ — 18.00

*(ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ - 1994)*

ಬೆಳಕು (3ನೇ ಮುದ್ರಣ) — ಗಾಯತ್ರಿ ಮೂರ್ತಿ — 22.00

*(ಆರ್ಯಭಟ ಪ್ರಶಸ್ತಿ - 1995)*

ಭಾರತೀಯ ದರ್ಶನಗಳು (2ನೇ ಮುದ್ರಣ) — ದೇವಿಪ್ರಸಾದ್ ಚಟ್ಟೋಪಾಧ್ಯಾಯ — 80.00

*(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ - 1994)* — *(ಅನು : ಬಿ. ವಿ. ಕಕ್ಕಿಲ್ಲಾಯ)*

ಆಪ್ತ ಸಲಹೆ ಸಮಾಧಾನ — ಡಾ// ಸಿ. ಆರ್. ಚಂದ್ರಶೇಖರ್ — 25.00

*(ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ - 1996)*




ವೇದಗಳು ಐಹಿಕ ಭೋಗಭಾಗ್ಯಗಳನ್ನು ಒದಗಿಸುವ ಯಜ್ಞಯಾಗಾದಿಗಳ ಕರ್ಮಮಾರ್ಗವನ್ನು ಬೋಧಿಸಿದರೆ, ಉಪನಿಷತ್ತುಗಳು ಆತ್ಯಂತಿಕ ಸತ್ಯವನ್ನು ಅಂದರೆ, ಯಾವುದರಿಂದ ಮಾನವನು ಐಹಿಕ ಬಂಧನದಿಂದ ಬಿಡುಗಡೆ ಪಡೆಯಬಹುದೋ ಅಂತಹ ದಿವ್ಯಜ್ಞಾನವನ್ನು ನೀಡುತ್ತವೆ. ಉಪನಿಷತ್ತುಗಳ ಪ್ರಮುಖ ವ್ಯಾಖ್ಯಾನಕಾರರಾದ ಶಂಕರಾಚಾರ್ಯರ ಪ್ರಕಾರ ಯಾರು ವೈದಿಕ ಕರ್ಮಮಾರ್ಗದಲ್ಲಿ ಆಕರ್ಷಣೆಯನ್ನು ಕಳೆದು ಕೊಂಡಿರುವರೋ, ಯಾರು ಐಹಿಕ ಅಥವಾ ಸ್ವರ್ಗಲೋಕದ ಸುಖಸಂಪತ್ತುಗಳ ಆಶೆಯನ್ನು ದಾಟಿರುವರೋ ಅಂತಹ ಉನ್ನತ ಹಂತದ ಮಾನವರಿಗೆ ಮಾತ್ರ ಉಪನಿಷತ್ತುಗಳು ಹಿಡಿಸುತ್ತವೆ.

ಶ್ರೀ ಆರ್. ಡಿ. ಹೆಗಡೆಯವರು ತಮ್ಮ ಪ್ರಬಂಧಗಳಲ್ಲಿ ವೇದಾಂತದ ಪಾರಿಭಾಷಿಕ ಪದಜಾಲವನ್ನು ಬಳಸದೆ ತಮ್ಮದೇ ಆದ ಓದಿನಿಂದ ತಾವು ಕಂಡುಕೊಂಡ ಅರ್ಥವನ್ನು ನಿವೇದಿಸಲು ತಮ್ಮದೇ ಆದ ಭಾಷೆಯನ್ನು ಬಳಸಿರುವುದು ಈ ಕೃತಿಯ ಒಂದು ವೈಶಿಷ್ಟ್ಯವಾಗಿದೆ. ಅಲ್ಲದೆ, ತಾವು ಆರಿಸಿಕೊಂಡ ಉಪನಿಷತ್ತುಗಳಲ್ಲಿ ಎಲ್ಲೆಲ್ಲಿ ಜೀವಪರವಾದ ಹಾಗೂ ಜೀವವಿರೋಧಿಯಾದ ನಿಲುವುಗಳು ಒಡಮೂಡಿವೆ ಮತ್ತು ಅವುಗಳಿಂದ ವ್ಯಕ್ತಿಯ ಹಾಗೂ ಸಮಾಜದ ಜೀವನದ ಮೇಲೆ ಆಗುವ ಪರಿಣಾಮಗಳು ಯಾವ ಬಗೆಯವು ಎಂಬ ವಿಶ್ಲೇಷಣೆಯೂ ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ.

ಬಿ. ವಿ. ವೀರಭದ್ರಪ್ಪ
(ಮುನ್ನುಡಿಯಿಂದ)

---

ರೂ. 40

ISBN 81-7302-302-6